# ಬೆರಗು

ಪ್ರಭುಶಂಕರ



ಮೈಸೂರು
1982

**BERAGU**
by Prabhu Shankara
Published 1982 by Aparna Prakashana
49, Akshaya, Kuvempunagara
Saraswathipuram, Mysore-9
Demy 1/12, 104 pages
Price Rs. 6–00 Calico Rs. 20–00

ಮೊದಲನೆಯ ಮುದ್ರಣ : ೧೯೮೨
ಅಪರ್ಣಾ ಪ್ರಕಾಶನ, 49 ಅಕ್ಷಯ, ಕುವೆಂಪುನಗರ
ಸರಸ್ವತೀಪುರಂ, ಮೈಸೂರು-9
ಮುದ್ರಣ : ನಂದಿ ಪ್ರಿಂಟಿಂಗ್ ಪ್ರೆಸ್, ಮೈಸೂರು–4
ಬೆಲೆ : 6–00 ರೂ ಕ್ಯಾಲಿಕೊ ಪ್ರತಿ : 20–00 ರೂ.

## ನೆನಪಿನ ಕಾಣಿಕೆ

ಈ ಕೃತಿಯನ್ನು ರಚಿಸುತ್ತಿರುವಾಗ ಚಿ. ಸೌ. ಡಾ| ವಿಜಯಾ ಕಲ್ಯಾಣ ಶೆಟ್ಟಿ ಅವರ ಅಕಾಲ ಮೃತ್ಯು ನನ್ನ ಮನಸ್ಸನ್ನು ಘಾಸಿಗೊಳಿಸಿತು. ನಮ್ಮ ಆಪ್ತ ಮಿತ್ರರಾದ ಶ್ರೀ ಬಿ. ಎಸ್. ತೋರಣಗಟ್ಟಿ ಮತ್ತು ಶ್ರೀಮತಿ ಲೀಲಾವತಿ ತೋರಣಗಟ್ಟಿ ಅವರ ಒಬ್ಬಳೇ ಮಗಳು ಡಾ. ವಿಜಯಾ. ಇಪ್ಪತ್ತೈದು ವರ್ಷದ ತರುಣಿ ವಿಜಯಾ ದೂರದ ನೈರೋಬಿಯಲ್ಲಿ ಪತಿ ಡಾ. ಅಶೋಕ್ ಕಲ್ಯಾಣ ಶೆಟ್ಟಿ ಅವರೊಡನೆ ವೈದ್ಯಕೀಯ ಸೇವೆಯಲ್ಲಿ ತೊಡಗಿ ಬದುಕಿಗೆ ಕಣ್ಣು ಬಿಡುತ್ತಿದ್ದರು. ಒಂದು ದಿನ. ಇದ್ದಕ್ಕಿದ್ದಂತೆ ಕುತ್ತಿಗೆಯ ಹತ್ತಿರ ನರದಲ್ಲಿ ರಕ್ತ ಹೆಪ್ಪುಗಟ್ಟಿ ವಿಜಯಾ ಪ್ರಜ್ಞೆ ಕಳೆದುಕೊಂಡರು. ಒಂದು ವಾರ ಅದೇ ಸ್ಥಿತಿಯಲ್ಲಿದ್ದು ಆಕೆ ಕಣ್ಣು ಮುಚ್ಚಿದರು.

ಆಕೆಯ ನೆನಪು ತಂದೆ ತಾಯಿಗಳನ್ನೂ, ಅಜ್ಜಿ, ತಾತ, ಪತಿ, ಹಾಗೆಯೇ ಅನೇಕ ಬಂಧು ಬಾಂಧವರನ್ನೂ ಕಾಡುತ್ತಿರುವಷ್ಟೇ ತೀವ್ರವಾಗಿ ನಮ್ಮನ್ನೂ ಕಾಡುತ್ತಿದೆ.

ಈ ಚಿಕ್ಕ ಪುಸ್ತಕವನ್ನು ಡಾ. ವಿಜಯಾ ಕಲ್ಯಾಣ ಶೆಟ್ಟಿ ಅವರ ನೆನಪಿಗೆ ಅರ್ಪಿಸಿದ್ದೇನೆ.

## ಎರಡು ಮಾತು

ಈ ಪುಟ್ಟ ಪುಸ್ತಕ ಬರೆಯಲು ನನಗೆ ಸ್ಫೂರ್ತಿ ನೀಡಿದ್ದು ಖಲೀಲ್ ಜಿಬ್ರಾನ್ ಅವರ The Son of Man. ಅದು ಏಸುಕ್ರಿಸ್ತನನ್ನು ಕುರಿತ ಸೊಗಸಾದ ಪುಸ್ತಕ. ಕ್ರಿಸ್ತನ ಸಮಕಾಲೀನರು ಕ್ರಿಸ್ತನ ಬಗ್ಗೆ ಹೇಳಿರಬಹುದಾದದ್ದು ಎಂಬಂತೆ ಅದರಲ್ಲಿ ನಿರೂಪಣೆಯಿದೆ.

ಬಸವಣ್ಣನವರನ್ನು ಕುರಿತಂತೆ ಅಂಥ ಒಂದು ಪುಸ್ತಕ ಬರೆಯಬೇಕು ಎಂಬ ಆಸೆ ಮನಸ್ಸನ್ನು ತುಂಬಿತ್ತು. ಅನೇಕ ವರ್ಷಗಳ ಅನಂತರ ಈಗ ಅದು ಸಾಧ್ಯವಾಗಿದೆ.

ನಮ್ಮ ದೇಶದ ಧಾರ್ಮಿಕ–ಸಾಮಾಜಿಕ ಇತಿಹಾಸದಲ್ಲಿ ಬಸವಣ್ಣನವರ ಸ್ಥಾನ ವಿಶಿಷ್ಟವಾದದ್ದು. ಜಾತಿಯ ಶಾಪಕ್ಕೆ ಗುರಿಯಾಗಿ ನರಳುತ್ತಿರುವ ಈ ಭಾಗ್ಯರಹಿತ ದೇಶದಲ್ಲಿ ಎಂಟು ನೂರು ವರ್ಷಗಳ ಹಿಂದೆಯೇ ಜಾತಿಯನ್ನು ನಿರ್ಮೂಲ ಮಾಡುವ ಮಹಾ ಸಾಹಸಕ್ಕೆ ಬಸವಣ್ಣನವರು ಕೈಹಾಕಿದರು. ವೈಜ್ಞಾನಿಕ ಮತ್ತು ವೈಚಾರಿಕ ಯುಗ ಎಂದು ಕರೆಸಿಕೊಳ್ಳುತ್ತಿರುವ ಇಪ್ಪತ್ತನೆಯ ಶತಮಾನವೂ ಜಾತೀಯತೆಯ ನಿರ್ಮೂಲನದ ವಿಷಯದಲ್ಲಿ ಸೋತು ಮುದುರಿ ಮಲಗಿದೆ. ಭರತ ಖಂಡದ ವಿಜ್ಞಾನಿಗಳೂ ಬುದ್ಧಿ ಜೀವಿಗಳೂ ಆ ಹೆಸರಿಗೇ ಅನರ್ಹರಾಗುವಷ್ಟರ ಮಟ್ಟಿಗೆ ಜಾತಿವಾದ, ಅವೈಜ್ಞಾನಿಕತೆ ಮತ್ತು ಅವೈಚಾರಿಕತೆಗಳೆಂಬ ಮಹಾ ಭೂತಗಳ ವಿಕಟ ನೃತ್ಯಕ್ಕೆ ತಂಬಟೆ ಬಡಿಯುವ ಪುರೋಹಿತಷಾಹಿಗಳಾಗಿದ್ದಾರೆ. ಭಾರತದ ವಿಶ್ವವಿದ್ಯಾನಿಲಯಗಳು–ಅವುಗಳ ಬಗ್ಗೆ ಇಷ್ಟೇ ಹೇಳಿದರೆ ಸಾಕು: ಭಾರತದಲ್ಲಿ ವಿಶ್ವವಿದ್ಯಾನಿಲಯಗಳು ಇರುವವರೆಗೆ ಜಾತೀಯತೆ ಖಂಡಿತವಾಗಿಯೂ ಈ ದೇಶದಿಂದ ತೊಲಗುವುದಿಲ್ಲ.

ಈ ಎಲ್ಲ ಅಂಶಗಳನ್ನು ಗಮನಕ್ಕೆ ತೆಗೆದುಕೊಂಡರೆ ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು ಮಾಡಿದ ಮಹಾ ಸಾಹಸ ವಿಶ್ವದ ಮಹದ್ಘಟನೆಗಳ ಸಾಲಿನಲ್ಲಿ ದಾಖಲೆ ಪಡೆಯಬೇಕಾದದ್ದು. ಆದರೆ ಬಸವಣ್ಣನವರು ಸೋತರು, ಮಹತ್ತಾಗಿ ಸೋತರು. ಈ ದೇಶದಲ್ಲಿ ಆಗಲೇ ಬೇಕಾದದ್ದನ್ನು, ಶತಮಾನಗಳು ಉರುಳಿದರೂ ಆಗದೇ ಹೋದದ್ದನ್ನು ಸಾಧಿಸುವ ದೊಡ್ಡ ಪ್ರಯತ್ನದಲ್ಲಿ ಅವರು ಸೋತರು. ಆ ಸೋಲಿನಲ್ಲಿ, ಮಾನವತೆ ಮುಂದೆ ಎಂದಾದರೂ ಸಾಧಿಸಲೇ ಬೇಕಾಗಿರುವ ಮಹಾ ವಿಜಯದ ಬೀಜ ಅಡಗಿದೆ. ಅದನ್ನು ಗುರುತಿಸಿ ಬಸವಣ್ಣನವರಿಗೆ ಸಲ್ಲಬೇಕಾಗಿರುವ ಗೌರವವನ್ನು ನೀಡದೆ ಹೋದರೆ ಇತಿಹಾಸದ ವಿಷಯದಲ್ಲಿ ನಾವು ಕುರುಡರಾಗಿ ಉಳಿಯುತ್ತೇವೆ. ಅಲ್ಲದೆ ಬಸವಣ್ಣನವರಿಗೂ ಅನ್ಯಾಯ ಮಾಡುತ್ತೇವೆ.

ಬಸವಣ್ಣನವರ ವ್ಯಕ್ತಿತ್ವ ಜಟಿಲವಾದದ್ದು, ಬಹು ವರ್ಣಮಯ ವಾದದ್ದು. ಭರತ ಖಂಡದ ಧರ್ಮದ ಇತಿಹಾಸದಲ್ಲಿ, ಬಹುಶಃ ಮೊದಲ ಬಾರಿಗೆ, ಆಧ್ಯಾತ್ಮಿಕ ವ್ಯಕ್ತಿಯೊಬ್ಬರು ರಾಜಕೀಯದಲ್ಲೂ ಸಕ್ರಿಯ ಪಾತ್ರ ವಹಿಸಿ. ಎರಡೂ ಕ್ಷೇತ್ರಗಳಲ್ಲಿ ಸಾಧನೆ ನಡೆಸಿದುದನ್ನು ಬಸವಣ್ಣನವರ ಬದುಕಿನಲ್ಲಿ ಕಾಣುತ್ತೇವೆ. ರಾಜಕೀಯ ಮತ್ತು ಆಧ್ಯಾತ್ಮಗಳಿಗೆ ರಾಕ್ಷಸ–ದೇವತೆಗಳ ಸ್ನೇಹ. ಆದರೂ ಅವೆರಡನ್ನೂ ಸರಿ ಹೊಂದಿಸಿ ತೂಗಿಸಿಕೊಂಡು ಹೋಗಲು ಬಸವಣ್ಣನವರು ಪ್ರಯತ್ನಿಸಿದರು. ಇಂಥ ಪ್ರಯೋಗ ನಡೆಸಲು ಹೋದದ್ದರಿಂದ ಅವರ ಬದುಕು ಸಹಜವಾಗಿಯೇ ಸಂಕೀರ್ಣತೆಯ ಸ್ವರೂಪವನ್ನು ಪಡೆಯಿತು. ಆ ಸಂಕೀರ್ಣತೆಯನ್ನು ಬಸವಣ್ಣನವರ ಸಮಕಾಲೀನರ ಕಣ್ಣು–ಮನಸ್ಸುಗಳಿಂದ ನೋಡುವ ಪ್ರಯತ್ನ ಇಲ್ಲಿ ನಡೆದಿದೆ. ಇತಿಹಾಸ ಒದಗಿಸುವ ಎಳೆಗಳು ತುಂಬ ಕಡಮೆ. ಆದ್ದರಿಂದ ಕಲ್ಪನೆಯ ಹಾಸು–ಹೊಕ್ಕುಗಳೇ ಹೆಚ್ಚಾಗಿವೆ. ವಚನಗಳ ಆಧಾರದಿಂದ ಕೆಲವು ಘಟನೆಗಳನ್ನು ರಚಿಸುವ ಕೆಲಸವೂ ನಡೆದಿದೆ. ಹೀಗೆಲ್ಲ ಆದುದರಿಂದ ಇದನ್ನು ಒಂದು ಸೃಜನಶೀಲ ಕೃತಿ ಎಂದು ನೋಡುವುದು ಅನಿವಾರ್ಯವಾಗುತ್ತದೆ.

ಇದನ್ನು ಬರೆದು ಮುಗಿಸುತ್ತಿದ್ದಂತೆಯೇ ನನ್ನ ಆಪ್ತರೂ ಮಿತ್ರರೂ ಆದ ಈ ಮುಂದಿನವರು ಓದಿದರು : ಶ್ರೀಯುತರುಗಳಾದ ಆರ್. ಎಲ್. ಅನಂತರಾಮಯ್ಯ, ಎಸ್. ಎಲ್. ಭೈರಪ್ಪ, ಆರ್. ಎಸ್. ಪೂರ್ಣಾನಂದ, ಎನ್. ಬಾಲಸುಬ್ರಹ್ಮಣ್ಯ ಮತ್ತು ಶ್ರೀ ಚೆನ್ನ ವೀರ ಕಣವಿ. ಜೊತೆಗೆ ಶ್ರೀಮತಿಯರಾದ ಶಾಂತಾ ಪ್ರಭುಶಂಕರ್, ಇಂದಿರಾ ಕೃಷ್ಣ, ಲೀಲಾವತಿ ತೋರಣ ಗಟ್ಟಿ, ಶಾಂತಾದೇವಿ ಕಣವಿ. ಎಲ್ಲರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಇಷ್ಟರೂ ಮಿತ್ರರೂ ಓದಿದಾಗ ನನಗೆ ಗೊತ್ತಾಯಿತು ಇದು ಒಂದೇ ಸಲಕ್ಕೆ ಓದಿಸಿಕೊಳ್ಳುವ ಪುಸ್ತಕ ಮಾತ್ರ ಅಲ್ಲ, ಅನೇಕ ಸಲ ತಿದ್ದಿಸಿಕೊಳ್ಳುವ ಪುಸ್ತಕವೂ ಹೌದು ಎಂದು ! ಎಲ್ಲ ಆತ್ಮೀಯರೂ ನೀಡಿದ ಎಲ್ಲ ಸಲಹೆಗಳನ್ನೂ ಪೂರ್ಣವಾಗಿ ಸ್ವೀಕರಿಸಲು ಸಾಧ್ಯವಾಗಿಲ್ಲ. ಅದಕ್ಕಾಗಿ ವಿಷಾದಿಸುತ್ತೇನೆ.

ಇಬ್ಬರು ಮಿತ್ರರ ಹೆಸರನ್ನು ವಿಶೇಷವಾಗಿ ಉಲ್ಲೇಖಿಸ ಬೇಕಾಗಿದೆ. ಒಬ್ಬರು ನನ್ನ ಹಿರಿಯ ಮಿತ್ರರೂ ಪ್ರಸಿದ್ಧ ವಿದ್ವಾಂಸರೂ ಆದ ಶ್ರೀ ಎನ್. ಬಾಲಸುಬ್ರಹ್ಮಣ್ಯ. ಬಸವಣ್ಣನವರನ್ನು ನಾನು ನೋಡಲು ಶಕ್ಯವಾಗದೇ ಇದ್ದ ದೃಷ್ಟಿಗಳಿಂದಲೂ ಅವರು ನೋಡಿ ಅಮೂಲ್ಯವಾದ ಸಲಹೆಗಳನ್ನು ನೀಡಿದ್ದಾರೆ. ಅವೆಲ್ಲವನ್ನೂ ನಾನು ಸ್ವೀಕರಿಸಿದ್ದೇನೆ. ಇನ್ನೊಬ್ಬರು ಮಿತ್ರರು ಶ್ರೀ ಆರ್. ಎಸ್. ಪೂರ್ಣಾನಂದ. ಅವರು ಹಸ್ತ ಪ್ರತಿಯನ್ನು ಆಮೂಲಾಗ್ರವಾಗಿ ಪರಿಷ್ಕರಿಸಿ ಅನೇಕ ಕಡೆ ಭಾಷೆಗೆ ಹೊಸ ಮೆರುಗನ್ನು ಕೊಟ್ಟಿದ್ದಾರೆ. ಇಬ್ಬರು ಮಿತ್ರರೂ ತೋರಿಸಿರುವ ಆಸ್ಥೆ, ವಹಿಸಿರುವ ಶ್ರಮಗಳಿಗೆ ಸರಿಯಾದ ರೀತಿಯಲ್ಲಿ ಕೃತಜ್ಞತೆ ತೋರಿಸಲು ಅಸಮರ್ಥನಾಗಿದ್ದೇನೆ. ಬಾಳಿನಲ್ಲಿ ಯಾರೂ ಎಲ್ಲ ಋಣಗಳಿಂದಲೂ ಮುಕ್ತರಾಗುವುದು ಸಾಧ್ಯವಿಲ್ಲ ಎಂಬ ತಿಳಿವಳಿಕೆ ಸಮಾಧಾನ ನೀಡಿದೆ.

ಈ ಕೃತಿಯು ರಚನೆಯಲ್ಲಿ ಡಾ|| ಎಂ. ಚಿದಾನಂದ ಮೂರ್ತಿಯವರ "ಬಸವಣ್ಣ" ಗ್ರಂಥದ ನೆರವನ್ನು ಪಡೆದಿದ್ದೇನೆ. ಅವರಿಗೆ ಕೃತಜ್ಞನಾಗಿದ್ದೇನೆ.

ನಷ್ಟದಿಂದ ನಷ್ಟಕ್ಕೆ ಧೈರ್ಯವಾಗಿ, ಅವಿಚಾರ ಪೂರ್ವಕವಾಗಿ ನುಗ್ಗುತ್ತಿರುವ ಅಪರ್ಣಾ ಪ್ರಕಾಶನದ ಮಿತ್ರರಿಗೆ ಕೃತಜ್ಞತೆಗಳು. ಮುದ್ರಕರಾದ ಶ್ರೀ ಷಡಕ್ಷರಿಯವರಿಗೆ ವಂದನೆಗಳು.

ಜನವರಿ, 1982 ಪ್ರಭುಶಂಕರ

## ೧. ಮುಂಡಗೆಯ ಮಾದಿರಾಜ

ಓ, ಅವನ ವಿಷಯವೆ? ಅದನ್ನೇನು ಕೇಳುತ್ತೀರಿ, ಬಿಡಿ. ನಮ್ಮ ವಂಶಕ್ಕೇ ಕೆಟ್ಟ ಹೆಸರು ತಂದವನು. ಬ್ರಾಹ್ಮಣನಿಗೆ ಮುಖ್ಯ ಜನಿವಾರ. ಅದನ್ನ ಯಜ್ಞೋಪವೀತ ಅಂತಾರೆ, ಪವಿತ್ರ ಅಂತಾರೆ. ಅಂಥದನ್ನೇ ಕಿತ್ತೆಸೆದನಲ್ಲ. ಅಂಥವನ ವಿಷಯ ಯಾವ ಬಾಯಲ್ಲಿ ಹೇಳಲಿ? ನೀಚ, ಪರಮ ನೀಚ. ಅಂಥವ ಏಕೆ ತಾನೆ ನಮ್ಮ ಮನೆಯಲ್ಲಿ ಹುಟ್ಟಿದನೋ ಅಂತ ಗೋಳಾಡ್ತಿದೀವಿ.

ನೋಡಿ, ಈಗಾಗಲೇ ನಿಮ್ಮ ಕಿವಿಗೆ ಬಿದ್ದಿರಬೇಕು, ನಮ್ಮದು ತುಂಬ ಪವಿತ್ರವಾದ ವಂಶ. ಅದರಲ್ಲೂ ನಾವು ಸಾಂಖ್ಯಾಯನ ಗೋತ್ರದವರು, ಕಮ್ಮೆ ವಂಶ. ನಮ್ಮ ಪೂರ್ವಿಕರು ಯಜ್ಞ ಯಾಗ ಮಾಡಿಸಿದವರು. ಬ್ರಹ್ಮಾಂಡವಾಗಿ ದಕ್ಷಿಣೆಯೂ ಸಿಕ್ಕಿತ್ತು ಅಂತ ಕಾಣುತ್ತೆ. ಯಾಕೇಂದ್ರೆ ಆಸ್ತಿ ಪಾಸ್ತಿ ಮಾಡಿಟ್ಟಿದ್ದಾರೆ.

ವೇದಾಧ್ಯಯನ ಚೆನ್ನಾಗಿ ಮಾಡಿದವರು ಸ್ವಾಮಿ, ಅವರು. ವೇದಗಳನ್ನ ನಾಲಗೆಯ ತುದಿಯಲ್ಲಿ ಮೆರೆಸಿದವರು ಅವರು ಅಂತ ಪ್ರಸಿದ್ಧಿ. ಇವತ್ತಿಗೂ ದೂರ ದೂರದ ಊರಿಂದ ಜನ ನಮ್ಮ ಮನೆ ವಿಚಾರಿಸಿಕೊಂಡು ಬರ್ತಾರೆ, ನಿಮ್ಮಲ್ಲಿದ್ದು ವೇದ ಓದಬಹುದೆ ಅಂತ ಕೇಳ್ತಾರೆ. ಇಂಥ ವಂಶದಲ್ಲಿ ಅಂಥವನು ಹುಟ್ಟಬಹುದೆ? ಹೇಳಿ, ನೀವೇ ಹೇಳಿ.

ಇನ್ನೇನಿಲ್ಲ, ನಾನೂ ಇವಳೂ-ಹೆಸರೆ? ಮಾದಾಂಬೆ-ಮಕ್ಕಳಿಲ್ಲದೆ ವರ್ಷಗಟ್ಟಲೆ ಯಾತನೆ ಪಟ್ಟೆವು. ಕಂಡ ಕಂಡ ದೇವರಿಗೆಲ್ಲ ಹರಕೆ ಹೊತ್ತೆವು. ತೀರ್ಥ ಯಾತ್ರೆ ಅಂತ ಸುತ್ತಾಡಿದೆವು. ಯಾರ್‍ಯಾರು ಯಾವ್ಯಾವ ವ್ರತ ಮಾಡೀಂದ್ರೆ ಅದನ್ನೆಲ್ಲ ಮಾಡಿದೆವು. ದಿನಗಟ್ಟಲೆ, ವಾರಗಟ್ಟಲೆ ಉಪವಾಸ, ಜಾಗರಣೆ ಎಲ್ಲಾ ಆಯ್ತು. ಕೊನೆಗೆ ಎಲ್ಲಾ ಸಾಕಾಗಿ ನಮ್ಮ ಹಣೆ ಬರಹ ಅಂತ ಸುಮ್ಮನಾದೆವು.

ಒಂದು ದಿನ ಯಾರೋ ಒಬ್ಬರು ಬಂದರು. ನಮ್ಮ ಮನೆ ಎಲ್ಲಿದೆ ಅಂತ ಕೇಳಿಕೊಳ್ಳುತ್ತಾ ಬಂದರಂತೆ. ವೃದ್ಧರು, ತೇಜಸ್ಸಿನ ಪುಂಜದಂತೆ ಇದ್ದರು. ಕೋಲೂರಿಕೊಂಡು ಬಂದರು. ನಮ್ಮದು, ನೀವೇ ನೋಡಿದಿರಲ್ಲಾ, ದೊಡ್ಡ ಅಗ್ರಹಾರ. ನಮ್ಮ ಪೂರ್ವಿಕರಿಗೆ ಯಾರೋ ರಾಜರು ದತ್ತಿಯಾಗಿ ಕೊಟ್ಟದ್ದು. ನಮಗೂ ಭೂಮಿ ಕಾಣಿ ಇದೆ. ಯಜಮಾನಿಕೆ ಇದೆ. ಅಯ್ಯೋ ಮಾತು ಎಲ್ಲಿಗೋ ಹೋಯಿತು. ಈಚೆಗೆ ಹೀಗೆ ಆಗುತ್ತೆ. ವಯಸ್ಸಾಯಿತು. ಬರೀ ವಯಸ್ಸಲ್ಲ, ಈ ಇವನು ಮನೆ ಬಿಟ್ಟು ಹೊರಟು ಹೋದ ಮೇಲೆ ಹೀಗೇ ಆಗುತ್ತಿದೆ.

ಏನು ಹೇಳುತ್ತಿದ್ದೆ ? ಹಾಂ. ವೃದ್ಧರು ಕೋಲೂರಿಕೊಂಡೇ ಬಂದರು. ಅಗ್ರಹಾರವೆಲ್ಲ ಸುತ್ತಿ ದಣಿದಿದ್ದರು. ಮುಖದ ತುಂಬ ಬೆವರು. ಮುಖದಲ್ಲಿ ಅಷ್ಟು ಕಳೆ. “ಮಾದಿರಾಜರ ಮನೆ ಅಂದರೆ ಇದೇಯಾ ?” ಅಂತ ನನ್ನನ್ನೇ ಕೇಳಿದರು. ಹೂಂ ಅಂದವನು ಒಳಕ್ಕೆ ಕರೆದುಕೊಂಡು ಬಂದು–ಇಗೋ ನೀವು ಕೂತಿದೀರಲ್ಲಾ ಅಲ್ಲೇ ಅದೇ ಜಾಗದಲ್ಲೇ ಅದೇ ಮಣೆಯ ಮೇಲೇ ಅವರನ್ನು ಕೂರಿಸಿದೆ. ಅದು ಇದು ಮಾತು ಕತೆ ನಡೆಯಿತು. ಯಥಾಶಕ್ತಿ ಉಪಚಾರಾನೂ ಮಾಡಿದೆ. “ನಾಲ್ಕು ದಿನ ನಿಮ್ಮಲ್ಲೇ ಇರುತ್ತೇನೆ, ಆಗಬಹುದೆ ?” ಎಂದು ಕೇಳಿದರು. “ಸ್ವಾಮಿ, ನಾಲ್ಕು ದಿನ ಅಲ್ಲ ನಾಲ್ಕು ವರ್ಷ ಇರಿ. ನಮಗೆ ತಾನೆ ಯಾರಿದ್ದಾರೆ? ನನಗೆ ಇವಳು, ಇವಳಿಗೆ ನಾನು. ನಮಗೂ ನಮ್ಮದೇ ಮುಖ ನೋಡಿ ನೋಡಿ ಬೇಜಾರಾಗಿದೆ” ಎಂದು ತಮಾಷೆ ಮಾಡಿದೆ. ಅವರು “ಯಾಕೆ, ಮಕ್ಕಳು ?” ಎಂದು ಕೇಳಿದರು. ನನ್ನ ಕಣ್ಣಿಂದ ಒಂದು ಹನಿ ನೀರು ತೊಟ್ಟಿತು. ಒಳಗೆ ಅವಳು ಬಾಗಿಲ ಹಿಂದೆ ನಿಂತು ನಮ್ಮ ಮಾತು ಕತೆ ಕೇಳಿಸಿಕೊಳ್ಳುತ್ತಿದ್ದಳು ಅಂತ ಕಾಣುತ್ತೆ. ಬಿಕ್ಕಿ ಬಿಕ್ಕಿ ಅತ್ತಳು. ಬಂದವರಿಗೆ– ಹೇಳಲು ಮರೆತಿದ್ದೆನೋ ಏನೋ, ಅವರ ಹೆಸರು ರುದ್ರಭಟ್ಟರು ಅಂತ– ಎಲ್ಲ ಅರ್ಥವಾಯಿತು. ಮಾತು ಅಲ್ಲಿಗೆ ನಿಂತಿತು.

ನಾಲ್ಕು ದಿನ ಕಳೆಯೋದರಲ್ಲಿ ನನಗೆ ಗೊತ್ತಾಯಿತು, ಭಟ್ಟರು ತುಂಬ ತಿಳಿದವರು. ನಡೆ ನುಡಿ ಎಲ್ಲ ಶುದ್ಧ. ಮೂರು ಹೊತ್ತೂ ಏನಾದರೂ ಅಧ್ಯಯನ ಮಾಡುತ್ತಲೇ ಇದ್ದರು. ಒಂದು ದಿನ ಯಾವುದೋ ಓಲೆಗರಿ ಹಾಳೆ ತಿರುವುತ್ತಿದ್ದವರು ಕೇಳಿದರು: 'ಒಂದು ವ್ರತ ಮಾಡುತ್ತೀರಾ? ನಿಮಗೆ ಖಂಡಿತ ಮಕ್ಕಳಾಗುತ್ತೆ.' ನನಗೆ ನಂಬಿಕೆ ಇರಲಿಲ್ಲ. ಆದರೂ ಕೇಳಿದೆ: 'ಯಾವ ವ್ರತ?' ಅವರು ಹೇಳಿದರು: 'ವೃಷಭ ವ್ರತ ಅಂತ. ಈಗ ನಾನು ಓದುತ್ತ ಇರೋ ಪುಸ್ತಕದಲ್ಲಿ ಅದರ ವಿಷಯ ಇದೆ.' ಅವರು ಹೇಳುತ್ತಿದ್ದಾಗ ಅವರ ಮುಖ ಮರೆತೇ ಹೋಯಿತು. ಶಿವನೇ ಹೇಳುತ್ತಿದ್ದಾನೆ ಅಂದು ಕೊಂಡೆವು. ಅವಳು, ಕೇಳಲೇ ಬೇಡಿ, 'ಈಗಲೇ ಪ್ರಾರಂಭ ಮಾಡೋಣ' ಅಂದಳು. ಅವರು ನಕ್ಕು ಸಮಾಧಾನ ಹೇಳಿದರು. ವಾರ ದಿನ ನೋಡಿ ವ್ರತ ಮಾಡಿಸಿದರು. ಅವರೇ ಮಂತ್ರ ಹೇಳಿದರು. ಎಂಥ ಉಚ್ಚಾರ ಸ್ವಾಮಿ, ಅವರದ್ದು. ಆದರೆ ವ್ರತ ಮಾತ್ರ ತುಂಬ ಕಷ್ಟದ್ದು. ಹದಿನೈದು ದಿನ ನಿಟ್ಟುಪವಾಸ, ಜಾಗರಣೆ.

ಸ್ವಲ್ಪದ್ದರಲ್ಲಿ ಹೇಳಿಬಿಡುತ್ತೇನೆ. ಅವರು ಮೂರು ತಿಂಗಳೋ ಏನೋ ನಮ್ಮಲ್ಲಿದ್ದು ಹೊರಟು ಹೋದರು. ಹೋಗಬೇಡಿ ಎಂದು ಎಷ್ಟು ಬೇಡಿಕೊಂಡರೂ ಕೇಳಲಿಲ್ಲ. ಕೊನೆಗೆ 'ಎಲ್ಲಿಗೆ ಹೋಗುತ್ತೀರಿ?' ಎಂದು ಕೇಳಿದೆ. ಅವರು ಸುಮ್ಮನೆ ನಕ್ಕರು. ನಾನು ಎಲ್ಲೂ ಕಂಡಿಲ್ಲದೆ ನಗೆ ಅದು. ನಕ್ಕು ಹೊರಟು ಹೋದರು.

ಅವರು ಹೋಗಿ ಆರು ತಿಂಗಳಾದರೂ ಈಕೆಗೆ ಗರ್ಭ ಕಟ್ಟಲಿಲ್ಲ. ಕೊನೆಗೆ ಅವರು ಮಾಡಿಸಿದ್ದೂ ಹತ್ತರ ಥರ ಹನ್ನೊಂದನೇ ವ್ರತ ಎಂದು ಸುಮ್ಮನಾದೆವು. ಆದರೆ ಇವಳ ಕಣ್ಣು ಸದಾ ಮಡುಗಟ್ಟಿರುತ್ತಿತ್ತು. ಅವರು ಹೋಗಿ ಒಂಬತ್ತೊ ಹತ್ತೋ ತಿಂಗಳಾಗಿತ್ತು ಅಂತ ಕಾಣುತ್ತೆ. ಒಂದು ದಿನ ಅವಳ ಕಣ್ಣನ್ನು ಯಾಕೋ ನೋಡಿದೆ. ಅಲ್ಲಿ ನೀರಿರಲಿಲ್ಲ, ಬೆಳಕು ಚಿಮ್ಮುತ್ತಿತ್ತು.

ಮಗು ಹುಟ್ಟಿತು. ಅದು ಮಗುವೆ? ಮಾಣಿಕ್ಯ. ನಮ್ಮ ಮನೆಯಲ್ಲಿ ಎಂಟು ವರ್ಷ ಬೆಳಕಿನ ಹೊಳೆ ಹರಿಯಿತು. ನಿತ್ಯೋತ್ಸವ.

ಇನ್ನೇನು ಹೇಳಲಿ, ಅದರ ಮುಂದಿನದೆಲ್ಲ ಗೋಳು, ಹಟಮಾರಿ ತನ, ಹೊಡೆತ, ಅವಮಾನ. ನಾನು ಬ್ರಾಹ್ಮಣನಾಗಿ ಹುಟ್ಟಿದ್ದಕ್ಕೆ ಮೂರೆಳೆ ಜನಿವಾರ ಕತ್ತಿನಲ್ಲಿ ಹಾಕೋಣ ಅಂತ ಹೊರಟೆ. ಹತ್ತು ಜನ ಸೇರಿಸಿದೆ. ಇವನು ಇದೆಲ್ಲಾ ಏನು, ಯಜ್ಞೋಪವೀತ ಅಂದರೇನು, ಅದು ಹೇಗೆ ಪವಿತ್ರ ಅಂತ ಹರಟೋದೆ? – ಕೇಳಲಿ, ಆದರೆ ನಾನು ಹೇಳಿದರೆ ಅರ್ಥವಾಗೋ ವಯಸ್ಸೇ ಅದು? ಅದೂ ಹತ್ತು ಜನದ ಮುಂದೆ ಹಾಗೆ ನನಗೆ ಅವಮಾನ ಮಾಡೋದೆ? – ಬಿಡಿ, ಮುಂದಿನದನ್ನ ನನ್ನ ಬಾಯಲ್ಲಿ ಹೇಳಿಸಬೇಡಿ.

## ೨. ಮಾದಾಂಬೆ

ಇವರು ಆಚೆ ಹೋದರೆ? ನನ್ನ ಮಗುವನ್ನು ಕಂಡರೆ ಇವರಿಗೆ ಅಷ್ಟೊ ದ್ವೇಷ. ಎಂಟು ವರ್ಷದ ಮಗುವಿಗೆ ಇದು ಸರಿ, ಇದು ತಪ್ಪು ಅಂತ ತಿಳಿಯುತ್ತೆ? ಇವರಿಗೆ ವಯಸ್ಸಾದದ್ದು ದಂಡಕ್ಕೆ. ಅಷ್ಟೊ ಗೊತ್ತಾಗಬೇಡವೆ?

ಎಂಥ ಮಗು ಅಂತೀರಿ? ಅದು ಅಂಬೆಗಾಲಿಡುವಾಗ ಕೃಷ್ಣ ನದೀ ನೆನಪು ನಮಗೆ. ಬಣ್ಣ ಮಾತ್ರ ಅಚ್ಚ ಬಿಳುಪು. ಅದು ನಡೆ ದಾಡಿದರೆ ತಿಳಿಯುತ್ತಲೇ ಇರಲಿಲ್ಲ. ಗಾಳಿ ಬೀಸಿದಂತೆ, ನದಿ ಹರಿ ದಂತೆ. ಆರು ವರ್ಷಕ್ಕೆ ವೇದ ಹೇಳುತ್ತಿತ್ತು. ಯಾವ ಶ್ಲೋಕ ಕೇಳಿ, ಹಾಡಿದರೆ ಕೇಳಿದವರಿಗೆ ಸೊಕ್ಕೇರಿದಂತೆ ಆಗಬೇಕು. ಅವನ ಕನ್ನಡ, ಅಂಥ ಕನ್ನಡ ನಾನು ಕೇಳೇ ಇಲ್ಲ. ನಮ್ಮ ಅಗ್ರಹಾರದವರೆಲ್ಲ ಬ್ರಾಹ್ಮಣರು ತಾನೆ? ನಾವು ಅವರು ಯಾರು ಮಾತನಾಡಿದರೂ ಅದು ಸಂಸ್ಕೃತವೋ ಕನ್ನಡವೋ ತಿಳಿಯುತ್ತಿರಲಿಲ್ಲ. ಈಗಲೂ ಅಷ್ಟೆ. ಅಷ್ಟರ ಮಟ್ಟಿಗೆ ಸಂಸ್ಕೃತ ಬೆರೆತ ಕನ್ನಡ ನಮ್ಮದು. ನಮ್ಮ ಮಗುವೋ ಸಂಸ್ಕೃ ತಕ್ಕೆ ಸಂಸ್ಕೃತ, ಕನ್ನಡಕ್ಕೆ ಕನ್ನಡ. ಎರಡರಲ್ಲೂ ಜಾಣ. ಅಚ್ಚ ಕನ್ನಡ ಮಾತಾಡುತ್ತಿತ್ತು. ಎಲ್ಲಿ ಕಲಿತಿತ್ತೊ ಮಗು ಅಂಥ ಕನ್ನಡವನ್ನ. ಮಾತನಾಡಿದರೆ ಮುತ್ತು ಸುರಿದಂತೆ, ಬೆಳಕು ಹರಿದಂತೆ.

ನನ್ನ ಮಗು ಅಂತ ಇಲ್ಲದ್ದು ಹೇಳುತ್ತೇನೆಯೇ? ಸುತ್ತ ಹತ್ತು ಮನೆಗೆ ಹೋಗಿ ಕೇಳಿ. ಅವರಿಗೆಲ್ಲ ನಮ್ಮನ್ನು ಕಂಡರೆ ಅಸೂಯೆ, ಇಂಥ ಲಕ್ಷಕ್ಕೊಬ್ಬ ಮಗ ನಮಗಿದ್ದಾನೆ ಅಂತ. ಆದರೂ ಅವನ ವಿಷಯಕ್ಕೆ ಎಷ್ಟು ಒಳ್ಳೆಯದು ಹೇಳುತ್ತಾರೆ, ಕೇಳಿ.

ಅವನದ್ದು ಒಂದೇ ತಪ್ಪು. ಮಾತೆತ್ತಿದರೆ ಇದು ಏಕೆ? ಅದು ಏಕೆ? ಅಂತ ಕೇಳೋದು. ವೇದ ಓದು, ಏಕೆ? ವ್ಯಾಕರಣ ಕಲಿ, ಏಕೆ? ಹೋಮ ಹವನ ಮಾಡೋದು ಏಕೆ? ಇಲ್ಲಿ ಹವಿಸ್ಸು ಕೊಟ್ಟರೆ

ಮೇಲಿರೋ ದೇವರಿಗೆ ಸೇರುತ್ತದೊ ? ನಾವು ಮೇಲು, ಹೊಲಗೇರಿಯವರು ಕೀಳು, ಏಕೆ? ಶೂದ್ರರ ಮನೆಯಲ್ಲಿ ಊಟ ಮಾಡಬಾರದು, ಏಕೆ ? ಹೊಲಗೇರಿಯವರು ನಮ್ಮ ಮನೆಗೆ ಬರಬಾರದು, ಏಕೆ?

ಇವರಿಗೋ ತಾಳ್ಮೆ ಇಲ್ಲ. ಮಗು ಪ್ರಶ್ನೆ ಕೇಳಿದರೆ ಉತ್ತರ ಹೇಳೋದು ಬಿಟ್ಟು ದಬ ದಬ ಬಡಿಯೋದು; ಉತ್ತರ ತಿಳಿಯದ್ದಕ್ಕೋ ಏನೋ. ಅಕ್ಕ ಪಕ್ಕದ ಶನಿಗಳು ಮುಸು ಮುಸು ನಗೋದು.

ಅದು ಹುಟ್ಟಿದ್ದು ಬೆಳೆದದ್ದು, ಎಂಟು ವರ್ಷ ಕಳೆದದ್ದು–ಒಂದೊಂದು ನಿಮಿಷದಲ್ಲಿ ಆದದ್ದು ಎಲ್ಲಾ ಈಗ ನಡೆದದ್ದು ಅನ್ನೋ ಹಾಗೆ ಜ್ಞಾಪಕ ಇದೆ. ಏನು ಬೇಕಾದರೂ ಕೇಳಿ; ಹೇಳುತ್ತೇನೆ. ನಮ್ಮ ಈ ದೊಡ್ಡ ಮನೆ ತುಂಬ ಈ ಮಗುವೇ ತುಂಬಿತ್ತು. ಮನೆ ತುಂಬ ಮೊದಲು ಅದರ ಕೇಕೆ, ಆಮೇಲೆ ನಗು.

ಅದಕ್ಕೆ ಎಂಟು ವರ್ಷ ತುಂಬಿತ್ತೋ ಇನ್ನೂ ಇಲ್ಲವೋ. ಇವರು ಅದಕ್ಕೆ ಮುಂಜಿ ಮಾಡುತ್ತೇನೆ ಅಂತ ಅಂದರು. ಅದು ಮುಂಜಿಯೂ ಬೇಡ ಏನೂ ಬೇಡ ಅಂತ ಅಂದುಬಿಡ್ತು. ಇವರು, ನಾನು ಬ್ರಾಹ್ಮಣ, ಮಗೂಗೆ ಎಂಟು ವರ್ಷಕ್ಕೆ ಮುಂಜಿ ಮಾಡುತ್ತೇನೆ ಅಂತ ಹಟ ಹಿಡಿದರು. ಅದು, ಮುಂಜಿ ಗಿಂಜಿ ಎಲ್ಲ ಕೆಲಸಕ್ಕೆ ಬಾರದ್ದು, ಅದರಿಂದೇನೂ ದೇವರು ಸಿಕ್ಕೋದಿಲ್ಲ ಅಂದುಬಿಡ್ತು. ಇವರು ಹಿಡಿದ ಹಟ ಇವರಿಗೆ, ಅದರ ಹಟ ಅದಕ್ಕೆ.

ಇವರು ಇಂಥ ದಿನ ಮುಂಜಿ ಅಂತ ತೀರ್ಮಾನ ಮಾಡಿಯೇ ಬಿಟ್ಟರು. ಬ್ರಾಹ್ಮಣರು ಬಂದು ಸೇರಿದರು. ಅದನ್ನು ಹಿಡಿದು ಮೂರೆಳೆ ದಾರ ಹಾಕಿದರು. ಹಟದಲ್ಲಿ ಅದರದ್ದೇನು ಕಡಮೆ ? ಅದು, ಸೇರಿದ ಬ್ರಾಹ್ಮಣರು ಮಂತ್ರ ಹೇಳುತ್ತಿರುವಾಗಲೇ ಎದ್ದು ಜೋರಾಗಿ ಕೂಗಿ ಜನಿವಾರ ಕಿತ್ತು ಎಸೆದು ಮನೆ ಬಿಟ್ಟು ಓಡಿಹೋಯಿತು.

ಅಬ್ಬ ! ಈ ಹಾರುವರ ಬಡಿವಾರ ಎಷ್ಟು? ಅರಿಯದ ಹಸುಳೆ ಜನಿವಾರ ಕಿತ್ತೆಸೆದದ್ದಕ್ಕೆ "ಬ್ರಾಹ್ಮಣ್ಯವೇ ಹೊರಟು ಹೋಯಿತು" ಅಂತ ಕುಣಿದಾಡಿದ್ರು. ನನ್ನ ಮಗು ಇವರ ಆರ್ಭಟ ಕೇಳಿ ತಮಟೆ ಸದ್ದಿಗೆ ಜಿಂಕೆ ಓಡಿ ಹೋಗೋ ಹಾಗೆ ದೌಡು ಹಾಕಿಬಿಟ್ಟಿತು. ಇವರೆಲ್ಲ ಬೇಕಾದರೆ ಬ್ರಾಹ್ಮಣ್ಯಕ್ಕೇ ನೇತು ಹಾಕ್ಕೊಳ್ಳಿ. ಇಷ್ಟಕ್ಕೂ ಆ ಜನಿವಾರಕ್ಕೇ ನೇತು ಹಾಕಿಕೊಂಡಿರೋ ಬ್ರಾಹ್ಮಣ್ಯ ಇದ್ದರೆಷ್ಟು, ಹೋದರೆಷ್ಟು ?

ನನ್ನ ಮಗು ಈಗ ನನ್ನ ಪಾಲಿಗೆ ಇಲ್ಲ. ಅವರಿವರನ್ನ ಕೇಳಿದರೆ ಇಲ್ಲೇ ಎಲ್ಲೋ ಹತ್ತಿರದಲ್ಲೇ ಇದೆ ಅಂತಾರೆ. "ಹೋಗಿ, ಹುಡುಕಿ ಕರೆತನ್ನಿ, ಏನೋ ಒಂದು ಸಲ ದುಡುಕಿ ಮಗು ಹಾಗೆ ಮಾಡಿತು" ಅಂದರೆ ಇವರ ಬಾಯಲ್ಲಿ ಬರೋ ಮಾತು : "ನಮ್ಮ ವಂಶಕ್ಕೇ ಕೆಟ್ಟ ಹೆಸರು ತಂದ ಆ ಅಯೋಗ್ಯ. ಅವನ್ನ, ನಾನು ಹುಡುಕಿಕೊಂಡು ಹೋಗೋದೇ ? ಅವನಾಗೇ ಬರಲಿ–ಬಂದರೂ ಮನೆ ಹೊಸಿಲು ಹತ್ತೋಕೂ ಬಿಡೋಲ್ಲ." ಇದು ಇವರ ಬ್ರಾಹ್ಮಣ್ಯ ಕಲಿಸಿದ ಅಂತಃಕರಣ.

ಈಗ ನನಗೂ ಇವರಿಗೂ ಮಾತಿಲ್ಲ. ನಮ್ಮಿಬ್ಬರ ಮಧ್ಯೆ ಮೌನ ಹೆಪ್ಪುಗಟ್ಟಿದೆ. ಈಚೆ ದಡದಲ್ಲಿ ಇವರು, ಆಚೆ ದಡದಲ್ಲಿ ನಾನು. ಯಾವತ್ತಾದರೂ ಇವರ ಕಣ್ಣು ತಪ್ಪಿಸಿ ಅವನ್ನ ಹುಡುಕ್ಕೋತಾ ಹೊರಟೆ ಅನ್ಕೊಳಿ.

## ೩. ಈಶಾನ್ಯ ಮೂರ್ತಿ

ಈ ಶಿವಾಲಯಕ್ಕೆ ಅವನು ಬಂದ ದಿನ ನನಗೆ ಚೆನ್ನಾಗಿ ನೆನಪಿದೆ. ಹೊಂಬೆಳಕಿನ ದೇಹ. ಅದನ್ನು ಮುಚ್ಚಲು ಪ್ರಯತ್ನಿಸುತ್ತಿದ್ದ ಎರಡು ಬಿಳಿಯ ಮೋಡಗಳು–ಒಂದು ತುಂಡು, ಒಂದು ಮುಂಡು. ದೊಡ್ಡ ಹಣೆ, ಕ್ಷೀರ ಪಥದ ಹಾಗೆ. ಅದು ತುಂಬ ಅಗಲ ಆಯಿತು, ಆ ಅಗಲವನ್ನು ಕಡಮೆ ಮಾಡಬೇಕು ಅನ್ನೋ ಹಾಗೆ ಅದರ ಮೇಲೆ ಒಂದೇ ಸಮನೆ ಇಳಿ ಬೀಳುತ್ತಿದ್ದ ಸುರುಳಿ ಸುರುಳಿ ಕೂದಲು. ಹಿಂದೆ ಕತ್ತನ್ನು ದಾಟಿ ಕೆಳಕ್ಕೆ ಇಳಿಬಿದ್ದ ಕೂದಲು.

ಬೆದರಿದ ಜಿಂಕೆಯ ಹಾಗೆ ಒಂದು ಕಂಬದ ಮರೆಯಲ್ಲಿ ಅವಿತು ನಿಂತಿದ್ದ. ಚಿಕ್ಕ ಹುಡುಗ, ಎಂಟು ಹತ್ತು ವರ್ಷದವನು, ಒಬ್ಬನೇ ಹಾಗೆ ಬೆದರಿ ನಿಂತಿದ್ದು ನೋಡಿ ನನಗೆ ಮರುಕ ಉಕ್ಕಿ ಬಂತು. ಹತ್ತಿರ ಹೋಗಿ ನೋಡಿದೆ. ಅಷ್ಟರಲ್ಲಿ ಮರುಕ ಪ್ರೀತಿಯಾಗಿತ್ತು. ಕಣ್ಣು ಎಷ್ಟು ಅಗಲ! ಅಗಲ ಕಣ್ಣಿನ ಅಂಗಳದ ತುಂಬ ನೀರು. ಹತ್ತಿರ ಹೋಗಿ ಮೈ ಸವರಿದೆ– ಬೆಂಕಿಯನ್ನು ಮುಟ್ಟಿದ ಹಾಗಾಯಿತು. ಜ್ವರ ಕುದಿಯುತ್ತಿತ್ತು. ನೋಡಿದರೆ ಎಲ್ಲಿಂದಲೋ ಓಡಿ ಬಂದ ಹಾಗಿತ್ತು. ಮುಖದ ತುಂಬ ಭಯ. ನೀನು ಯಾರು? ಊರು ಯಾವುದು, ತಂದೆ ತಾಯಿ ಯಾರು? ಇದ್ದಾರೆಯೋ ಇಲ್ಲವೊ? ಯಾಕೆ ಬಂದೆ? ಇಲ್ಲಿಗೆ ಕಳಿಸಿದ್ದು ಯಾರು? –ನೂರು ಸಲ ಕೇಳಿದರೂ ಒಂದು ಮಾತೂ ಹೊರಡಲಿಲ್ಲ. ಅವನನ್ನ ಕೇಳೋದೂ ಒಂದೇ, ಅವನಿಗೆ ಮರೆ ನೀಡಿದ್ದ ಕಂಬಾನ ಕೇಳೊದೂ ಒಂದೇ ಅಂತ ಸುಮ್ಮನಾದೆ. ಇಗೋ ಈ ಮೂಲೆಯಲ್ಲಿ ಒಂದು ಚಾಪೆ ಬಿಡಿಸಿದೆ. ನಾಲ್ಕು ದಿನ ನನ್ನ ಕೈಲಾದ ಶುಶ್ರೂಷೆ ಮಾಡಿದೆ. ಚೇತರಿಸಿಕೊಂಡ.

ನಾನೂ ಒಂಟಿ ಜೀವ. ಜೊತೆಗೊಬ್ಬರು ಸಿಕ್ಕಿದ ಹಾಗಾಯಿತು. ನನ್ನ ಹಾಗೇ ಅವನೂ ಈ ದೇವಸ್ಥಾನದಲ್ಲೇ ಇದ್ದ. ನನಗೆ ತಿಳಿದ ನಾಲ್ಕಕ್ಷರ ಹೇಳಿಕೊಡೋಣ ಅಂತ ನೋಡಿದರೆ ಅವನಿಗೆ ವಯಸ್ಸಿಗೆ

ಮೀರಿದ ಜ್ಞಾನ ಸಾಧಿಸಿತ್ತು. ವೇದದ ಯಾವ ಭಾಗ ಕೇಳಲಿ ತಡ ವರಿಸದೆ ಹೇಳುತ್ತಿದ್ದ. ಯಾರದ್ದೋ ಬ್ರಾಹ್ಮಣರ ಮನೆಯ ಹುಡುಗ ಅಂದುಕೊಂಡೆ. ವೇದಪಾಠ ಮುಂದುವರಿಸಲೇ ಎಂದೆ. ಬೇಡ ಅಂದು ಬಿಟ್ಟ. ವ್ಯಾಕರಣ, ಛಂದಸ್ಸು, ಆಗಮ—ಉಹುಂ, ಬೇಡ ಅಂತ ಒಂದೇ ಉತ್ತರ. ಏನು ಬೇಕು ಅದಾದರೂ ಹೇಳು ಅಂದೆ. ಶಿವಲಿಂಗದ ಕಡೆ ಕೈ ತೋರಿಸಿದ. ಶಿವ ಬೇಕೆ? ಎಂದೆ. ಹೌದು ಎಂದ. ನನಗೆ ರೋಮಾಂಚನವಾಯಿತು. ಈ ದೇವಸ್ಥಾನಕ್ಕೆ ಲೆಕ್ಕ ವಿಲ್ಲದಷ್ಟು ಜನ ಬಂದು ಹೋಗೋದನ್ನ ನೋಡಿದೀನಿ. ಬಂದವರೆಲ್ಲ ವಿದ್ಯೆ ಬೇಕು, ಭಾಗ್ಯ ಬೇಕು, ಸಂತಾನ ಬೇಕು, ಪದವಿ ಬೇಕು ಅಂತ ಬಗೆ ಬಗೆಯಾಗಿ ಹಾಡಿ, ಬೇಡಿ, ಕಾಡಿ ಶಿವನನ್ನ ಕಲ್ಲು ಮಾಡಿ ಬಿಟ್ಟಿದ್ದರು. ಈ ಇವನಾದರೋ ಶಿವನೇ ಬೇಕು ಅಂತಿದಾನೆ. ಶಾಸ್ತ್ರ, ಭಕ್ತಿ, ಪೂಜೆ, ಕಡೆಗೆ ದೇವರು ಎಲ್ಲಾದರಲ್ಲೂ ಅಪನಂಬಿಕೆ ಬರಿಸಿಬಿಟ್ಟಿದ್ದರು ಜನ. ಇವನು ಮತ್ತೆ ಅವಕ್ಕೆಲ್ಲ ಪ್ರಾಣ ಕೊಟ್ಟ. ಶಿವನೇ ಬೇಕು ಅಂದನೋ ಇಲ್ಲವೋ, ಹೋಗಿ ತಕೋ ಅಂದೆ. ಧೈರ್ಯವಾಗಿ ಗರ್ಭಗುಡಿಗೆ ಹೋದ. ಶಿವಲಿಂಗವನ್ನು ತನ್ನ ತಾಯಿ ಎಂಬಂತೆ ಅಪ್ಪಿಕೊಂಡ. ಚಿಕ್ಕ ಕೂಸು ಎಂಬಂತೆ ತಲೆ ನೇವರಿಸಿದ. ಅಲ್ಲಿ ಹರಿಯುತ್ತಿದೆ ನೋಡಿ, ಮಲಪ್ರಹಾರಿ ನದಿ, ಅಲ್ಲಿಂದ ಚೊಂಬಿನಲ್ಲಿ ನೀರು ತಂದು ಅಭಿಷೇಕ ಮಾಡಿದ. ತಾನು ಹೊದ್ದಿದ್ದ ಬಟ್ಟೆಯಿಂದ ಒರೆಸಿದ. ಸುತ್ತ ಮುತ್ತ ಬೆಳೆದಿದ್ದ ಹೂವು ತಂದು ಮುಡಿಸಿದ. ಶಿವನ ಮುಂದೆ ಕಣ್ಣು ಮುಚ್ಚಿ ಧ್ಯಾನಕ್ಕೆ ಕುಳಿತ. ಆ ವಯಸ್ಸಿಗೇ ಎಂಥ ತನ್ಮಯತೆ! ಭಕ್ತಿ ಎಂದರೆ, ಧ್ಯಾನ ಎಂದರೆ ಅವನಿಂದ ಕಲಿಯಬೇಕು. ಇಡೀ ದಿನ ಪೂಜೆ, ಧ್ಯಾನ ಇಷ್ಟೇ. ತನ್ನ ವಯಸ್ಸಿನವರ ಜೊತೆ ಆಟ ಆಡಬೇಕು ಎಂಬ ಆಸೆ ಕಾಣಲಿಲ್ಲ. ದೊಡ್ಡವರ ಜೊತೆಯೂ ಬೆರೆಯ ಲಿಲ್ಲ. ಹಾಕಿದರೆ ಉಣ್ಣುತ್ತಾನೆ, ಇಲ್ಲದಿದ್ದರೆ ಇಲ್ಲ. ಒಂದೇ ಒಂದು ದಿನವಾದರೂ ಅವನು 'ನನಗೆ ಹಸಿವು ಊಟ ಹಾಕಿ' ಎಂದು ಕೇಳಿದ್ದು ನೆನಪಿಲ್ಲ. ಬಟ್ಟೆ ಬರೆಯ ಕಡೆ ಗಮನವಿಲ್ಲ. ಅದು ಬೇಕು ಇದು ಬೇಕು ಎಂದು ಕೇಳಿದವನೇ ಅಲ್ಲ. ನಾನು ದಿನಾ ಅಡುಗೆ ಬೇಯಿಸು

ತ್ತಿದ್ದೆ. ನಾವಿಬ್ಬರೂ ಇಲ್ಲೇ ಊಟ ಮಾಡುತ್ತಿದ್ದೆವು, ಇಲ್ಲೇ ಮಲಗು ತ್ತಿದ್ದೆವು. ಮಧ್ಯ ರಾತ್ರಿಯೋ ಬೆಳಗಿನ ಜಾವವೋ ಕಣ್ಣು ಬಿಟ್ಟು ನೋಡಿದರೆ ಶಿವನ ಮುಂದೆ ಕಣ್ಣು ಮುಚ್ಚಿ ಕೂತಿರುತ್ತಿದ್ದ.

ಹಾಗೆಯೇ ಹತ್ತೋ ಹನ್ನೊಂದೋ ವರ್ಷಗಳು ಉರುಳಿ ಹೋದುವು. ಯಾವತ್ತೋ ತುಂಬ ಒತ್ತಿ ಕೇಳಿದ್ದಕ್ಕೆ ತನ್ನ ಹೆಸರು ಬಸವ ಎಂದು ಹೇಳಿದ್ದ. ಅದೊಂದೇ ಅವನ ಸ್ವಂತ ವಿಷಯ, ಅಷ್ಟು ವರ್ಷಕ್ಕೆ, ಅವನು ಹೇಳಿದ್ದು! ಆಗ ಬಸವನಿಗೆ ತುಂಬುಪ್ರಾಯ. ಅವನನ್ನ ನೋಡಿದರೆ ಎಂಥವರಿಗೂ ಪ್ರೀತಿ ಉಕ್ಕಿ ಹರಿಯುತ್ತಿತ್ತು. ಸ್ಫುರದ್ರೂಪಿ. ಇನ್ನು ಎಲ್ಲಾದರೂ ಒಂದು ಹೆಣ್ಣು ನೋಡಿ ಮದುವೆ ಮಾಡಿ ಸಂಸಾರಸ್ಥನನ್ನಾಗಿ ಮಾಡೋಣ ಎಂದುಕೊಂಡೆ. ಹೆಣ್ಣು ಹೆತ್ತ ಹಿರಿಯರು ಹತ್ತಾರು ಜನ ಬಂದು ಅವನ ವಿಷಯ ನನ್ನನ್ನ ಕೇಳುತ್ತಿದ್ದರು. "ಅವನು ಯಾವ ಜಾತಿ?" ಎಂದು ಬಿಡಿಸಿ ನನ್ನನ್ನು ಕೇಳುತ್ತಾರೆ. ನಾನು ಏನು ತಾನೆ ಹೇಳಲಿ? ನಾನೋ ಅವಧೂತ. ಒಂದು ದಿನ ತುಂಬ ಒತ್ತಾಯ ಮಾಡಿದ್ದಕ್ಕೆ 'ನನಗೆ ಜಾತಿ ಗೀತಿ ಏನೂ ಇಲ್ಲ'– ಎಂದು ಒರಟಾಗಿ ಹೇಳಿದ. ನಾನು "ಹಾಗಲ್ಲ, ಹತ್ತು ಜನದ ಮಧ್ಯೆ ನೀನು ಓಡಾಡಬೇಕಾದ ಕಾಲ ಬರಬಹುದು. ಆಗ ಜನಕ್ಕೆ ಈ ರೀತಿ ಒರಟು ಉತ್ತರ ಕೊಟ್ಟರೆ ನಡೆಯುವುದಿಲ್ಲ. ಏನಾದರೂ ಒಂದು ಹೇಳು" ಅಂದೆ. ಅವನು ಬಹಳ ಹೊತ್ತು ಮೌನವಾಗಿ ಕುಳಿತಿದ್ದ. ನಾನು ಏನೋ ಯೋಚಿಸು ತ್ತಿದ್ದಾನೆ ಎಂದು ಸುಮ್ಮನಿದ್ದೆ. ಕೊನೆಗೆ ಹೇಳಿದ: "ನೋಡಿ ನಾನು ಶಿವನ ಭಕ್ತ. ಅದೇ ನನ್ನ ಜಾತಿ. ಯಾರಾದರೂ ಕೇಳಿದರೆ ನಾನು ಶಿವಭಕ್ತ ಎಂದು ಹೇಳಿ ಬಿಡಿ." ನಾನು ವಾದ ಮಾಡುವುದಕ್ಕೆ ಹೋದೆ. "ಶಿವಭಕ್ತ ಎನ್ನುವುದು ಜಾತಿಯೂ ಅಲ್ಲ, ವೃತ್ತಿಯೂ ಅಲ್ಲ, ಬರೀ ಪ್ರವೃತ್ತಿ. ಅದು ಜಾತಿ ಹೇಗಾಗುತ್ತದೆ?" ಅವನು "ಆಗುತ್ತದೆ, ಆಗುತ್ತದೆ" ಎಂದು ಹೊರಟುಹೋದ.

ಬಸವ ಒಂದು ದಿನ ನನ್ನ ಎದುರಿಗೆ ಬಂದು ತಲೆ ತಗ್ಗಿಸಿ ನಿಂತು ಕೊಂಡ. "ಏನು ?" ಎಂದು ಕೇಳಿದೆ. "ನಾನು ಇಲ್ಲಿಂದ ಹೋಗು ತ್ತೇನೆ." ಅವನ ಉತ್ತರ ಕೇಳಿ ನನಗೆ ದಿಗ್ಭ್ರಮೆಯಾಯಿತು. ಅವ ಧೂರ್ತನಾದ ನನಗೂ ಮೋಹ ಹುಟ್ಟುವ ಮಟ್ಟಿಗೆ ಅವನು ನನ್ನ ಹೃದ ಯಕ್ಕೆ ಹತ್ತಿರವಾಗಿದ್ದ, ಮುದ್ದಿನ ಮಗನಾಗಿದ್ದ. ನಾನೂ ಏನಾದರೂ ಅವನ ಮನಸ್ಸು ನೋಯಿಸಿದೆನೋ ಎಂದುಕೊಂಡೆ. "ಯಾಕೆ ಮಗೂ, ನನ್ನಿಂದ ಏನು ಅಪಚಾರವಾಯಿತು ?'' ಅವನೂ ಸ್ವಲ್ಪ ಚಲಿತನಾಗಿದ್ದ. ನನ್ನ ಕಾಲಿಗೆ ನಮಸ್ಕಾರ ಮಾಡಿದ. ''ನೀವು ನನ್ನನ್ನ ತಂದೆ ತಾಯಿ ಎಲ್ಲಾ ಆಗಿ ನೋಡಿಕೊಂಡಿರಿ. ನಿಮ್ಮಿಂದ ಅಪಚಾರವೆ ?'' ''ಮತ್ತೆ ಏನಾಯಿತಪ್ಪ, ಯಾಕೆ ಹೋಗೋದು ? ಎಲ್ಲಿಗೆ ಹೋಗೋದು ?'' ಅವನು ನಿಧಾನವಾಗಿ, ಯೋಚಿಸಿ, ಯೋಚಿಸಿ ಹೇಳಿದ: "ನನಗೆ ಅನ್ನಿಸುತ್ತದೆ, ಯಾರೂ ಸುಮ್ಮನೆ ಕೂತು ಊಟ ಮಾಡಬಾರದು. ನಾನೋ, ಇಲ್ಲಿ ಬಿಟ್ಟಿ ಕೂಳು ತಿನ್ನುತ್ತಿದ್ದೇನೆ." ನನಗೂ ಚುಚ್ಚಿದ ಹಾಗಾಯಿತು. "ನಾನೋ ?'' ಎಂದು ಕೇಳಿದೆ. "ನೀವು ಬಿಟ್ಟಿ ಕೂಳು ತಿನ್ನುತ್ತಿಲ್ಲ. ಇಲ್ಲಿ ಗುಡಿಸೋದು, ಅಡುಗೆ ಮಾಡೋದು ಹೀಗೆ ಬೇಕಾದಷ್ಟು ಕೆಲಸ ಮಾಡುತ್ತೀರಿ. ಸಂಜೆ ಹೊತ್ತು ಬಂದವರಿಗೆ ನಿಮಗೆ ಸರಿ ಅನ್ನಿಸಿದ ನಾಲ್ಕು ಮಾತು ಹೇಳು ತ್ತೀರಿ. ಇದೆಲ್ಲ ಕೆಲಸವೇ. ಆದರೆ ನಾನು ಮಾತ್ರ ಏನೂ ಮಾಡು ತ್ತಿಲ್ಲ. ಎಲ್ಲಿಗಾದರೂ ಹೋಗುತ್ತೇನಿ. ಯಾವುದೋ ಒಂದು ಕೆಲಸ ಅಂತ ಹುಡುಕಿಕೊಳ್ಳುತ್ತೇನಿ. ಮೈ ಬಗ್ಗಿಸಿ ದುಡಿದು ಅನ್ನ ಬಟ್ಟೆ ಸಂಪಾದಿಸಿಕೋತೀನಿ.'' ನಾನು ನೂರಾರು ರೀತಿ ಹೇಳಿದೆ. ಕೇಳ ಲಿಲ್ಲ. ಕೈ ಮುಗಿದು ನಿಂತ ನಿಲುವಿನಲ್ಲೇ ಹೊರಟು ಹೋದ. ಮಂಗಳವೇಡೆಯ ಕಡೆ ಬಿರು ಬಿರನೆ ಹೆಜ್ಜೆ ಹಾಕಿಕೊಂಡು ಹೋದ ಎಂದು ನೋಡಿದವರು ಹೇಳಿದರು. ನಾನು ಆಕಡೆಯೇ ಕಣ್ಣಾಗಿ ಕುಳಿತಿದ್ದೇನೆ. ಅವನು ಯಾವತ್ತಾದರೂ ಇಲ್ಲಿಗೆ ಬಂದೇ ಬರುತ್ತಾನೆ ಎಂದು ಆಸೆ.

## ೪. ಸಿದ್ಧ ದಂಡನಾಥ

ಆ ದಿನ ನಾನು ಖಜಾನೆಯ ಪರೀಕ್ಷೆಗೆ ಹೋದದ್ದು ತೀರ ಆಕಸ್ಮಿಕ. ಅಲ್ಲಿ ಹೋಗಿ ನೋಡಿದರೆ ಏನೋ ಕೋಲಾಹಲ. ನನ್ನನ್ನು ನೋಡಿ ಗಣಕರು ಕಕ್ಕಾಬಿಕ್ಕಿಯಾದರು. ಕೂಡಿ ಕಳೆದು ಏನೇನು ಮಾಡಿದರೂ ಐದು ಲಕ್ಷ ನಾಣ್ಯಗಳಿಗೆ ಲೆಕ್ಕ ಸಿಕ್ಕುತ್ತಿಲ್ಲ ಎಂದು ಹೇಳಿದರು. ಅವರು ಹಣ ತಿಂದಿಲ್ಲ ಎಂದು ನನಗೆ ಗೊತ್ತಿತ್ತು. ಪ್ರಭು ಬಿಜ್ಜಳನ ಊಳಿಗದವರಲ್ಲಿ ಯಾರೂ ಬೊಕ್ಕಸದ ಚಿಕ್ಕಾಸನ್ನೂ ಮುಟ್ಟುವವರಲ್ಲ ಎಂಬುದು ಇಡೀ ಮಂಗಳವೇಡೆಗೆ ತಿಳಿದಿತ್ತು. ಆದರೂ ರಾಜಧನವಷ್ಟೇ ? ರಾಜಧನ ಎಂದರೇನು, ಪ್ರಜೆಗಳ ಧನ ತಾನೆ ? ಅದರಲ್ಲಿ ಒಂದು ಕಿಲುಬು ನಾಣ್ಯವೂ ಕಳೆದು ಹೋಯಿತು ಎಂಬ ಅನುಮಾನ ಯಾರಿಗೂ ಬರಕೂಡದು. ನಾನು ಅಲ್ಲೇ ಕುಳಿತು ಬಿಟ್ಟೆ. ನಾನು ಬೊಕ್ಕಸದ ಅಧಿಕಾರಿ ನೋಡಿ. ನಾನೇ ಎದುರಿಗೆ ಕುಳಿತದ್ದರಿಂದ ಗಣಕರ ಭಯ ಇನ್ನೂ ಹೆಚ್ಚಿತು. ಬರೀ ಗುಜು ಗುಜು, ಗಲಿಬಿಲಿ. ಈ ಹಾಳೆ ನೋಡಿ, ಆ ಹಾಳೆಯಲ್ಲಿ ಏನೋ ಬಿಟ್ಟು ಹೋಗಿದೆ ಎಂದು ಒಬ್ಬರಿಗೊಬ್ಬರು ಹೇಳುತ್ತಾ ಯಾರಿಗೂ ಏನೂ ಅರ್ಥವಾಗದ ಹಾಗೆ ಮಾಡಿದ್ದರು. ಅವರ ಗೊಂದಲಕ್ಕೆ ನನಗೆ ಒಳಗೊಳಗೇ ನಗು ಬರುತ್ತಿತ್ತು. ಆದರೂ ಹೊರಗೆ ಕೋಪ ತೋರಿಸಿಕೊಳ್ಳುತ್ತಾ ಕುಳಿತಿದ್ದೆ.

ಇದ್ದಕ್ಕಿದ್ದಂತೆ ಉರುಳುತ್ತಿದ್ದ ಅಲೆಗಳು ನಿಂತಂತೆ, ಬೀಸುತ್ತಿದ್ದ ಬಿರುಗಾಳಿ ಚಲನೆ ಕಳೆದುಕೊಂಡಂತೆ, ಶಬ್ದಕ್ಕೆ ಮಾತು ಹೋದಂತೆ ಅನ್ನಿಸಿತು. ಎಲ್ಲರೂ ಮಾಡುತ್ತಿದ್ದ ಕೆಲಸವನ್ನ ಅಲ್ಲಿಗೇ ಬಿಟ್ಟು ಬಾಗಿಲ ಕಡೆ ನೋಡುತ್ತಿದ್ದರು. ನಾನೂ ನೋಡಿದೆ. ನೋಡಿದೆ ಎಂಬುದು ಸರಿಯಾದ ಮಾತೇ ಅಲ್ಲ. ಬಂದು ಬಾಗಿಲಲ್ಲಿ ನಿಂತವನು ನನ್ನ ಕಣ್ಣುಗಳನ್ನು ತುಂಬಿ ಬಿಟ್ಟಿದ್ದ. ಬಟ್ಟೆ, ಮುಖ, ತಲೆಯ

ಕೂದಲು ಎಲ್ಲವನ್ನೂ ಧೂಳು ಮುಚ್ಚಿತ್ತು. ಉಟ್ಟಿದ್ದ ಬಟ್ಟೆ ಯಾದರೂ ಎಷ್ಟು ?– ಒಂದು ಧೋತ್ರ ಒಂದು ಉತ್ತರೀಯ. ಮುಚ್ಚಿದ್ದ ಧೂಳನ್ನೂ ತೊಟ್ಟಿದ್ದ ಬಟ್ಟೆಯನ್ನೂ ಭೇದಿಸಿಕೊಂಡು ಯೌವನದ ಕಾಂತಿ ಹೊರ ಚಿಮ್ಮುತ್ತಿತ್ತು. ಮುಖದಲ್ಲಿ ಅಪಾರ ಶಾಂತಿ. ಅಂಥ ತಾರುಣ್ಯ ಅಷ್ಟು ಶಾಂತಿಯನ್ನು ಮುಡಿದಿದ್ದುದನ್ನು ನಾನು ಹಿಂದೆಂದೂ ಕಂಡಿರಲಿಲ್ಲ.

ಅತ್ತ ಇತ್ತ ನೋಡದೆ ಅವನು ನೇರ ಒಳಗೆ ಬಂದ. ಕಾಡಿನಲ್ಲಿ ಸಿಂಹ ನಡೆಯುವುದು ಹಾಗೇ ಎನ್ನುತ್ತಾರೆ. ನಡೆದು ಬರುತ್ತಾ ಅಲಂಕಾರ ಮಾಡಿದ ಪೀಠದ ಮೇಲೆ ಕುಳಿತಿದ್ದ ನನ್ನನ್ನೂ ಗಮನಿಸಲಿಲ್ಲ. ಗಣಕರ ಮಧ್ಯೆ ಹೋಗಿ ಕುಳಿತ. "ನಿಮ್ಮ ಲೆಕ್ಕದ ಹಾಳೆಗಳನ್ನೆಲ್ಲ ಈ ಕಡೆ ಕೊಡಿ" ಎಂದ. ಕಕ್ಕಾಬಿಕ್ಕಿಯಾದ ಅವರು ಅವನು ಯಾರು, ಏನು, ಲೆಕ್ಕದ ಹಾಳೆಗಳನ್ನು ಕೇಳಲು ಏನು ಅಧಿಕಾರ ಅವನಿಗೆ, ಒಂದೂ ಕೇಳಲಿಲ್ಲ. ಕಾಣದ ಯಾವುದೋ ಅಧಿಕಾರಕ್ಕೆ ಒಳಗಾದವರಂತೆ ತಮ್ಮ ಕೈಯಲ್ಲಿ ಇದ್ದುದನ್ನೆಲ್ಲ ಅವನ ಕೈಯಲ್ಲಿ ಇಟ್ಟರು. ಅವನು ಬಹಳ ಹೊತ್ತು ಅವನ್ನೆಲ್ಲ ಕೈಯಲ್ಲಿಟ್ಟುಕೊಂಡು ನೋಡಿದ. ಕಂಠಪತ್ರ ಹಿಡಿದು ಇನ್ನೊಂದು ಹಾಳೆಯಲ್ಲಿ ಏನೋ ಗುರುತು ಹಾಕುತ್ತಿದ್ದ. ನಾನೂ, ಉಳಿದವರೂ ಅವನನ್ನೇ ನೋಡುತ್ತಾ ಕುಳಿತುಬಿಟ್ಟಿದ್ದೆವು. ಅವನ ರೂಪ, ಮುಖದ ಶಾಂತಿ ನನ್ನ ಮನಸ್ಸನ್ನೆಲ್ಲ ತುಂಬಿ ಏನೇನೋ ಆಸೆಗಳನ್ನು ಗರಿಗೆದರಿಸುತ್ತಿದ್ದುವು. ಅಷ್ಟರಲ್ಲಿ ಮತ್ತೆ ಗುಜು ಗುಜು ಹರ್ಷದ ಧ್ವನಿ ಕೇಳಿ ಬಂತು. ಗಣಕರು ಸಂತೋಷದಿಂದ 'ಸಿಕ್ಕಿತು, ಸಿಕ್ಕಿತು' ಎಂದು ಕುಣಿದಾಡುತ್ತಿದ್ದರು. ಅಲ್ಲಿ ನಾನಿದ್ದದ್ದು ಯಾರ ಗಮನಕ್ಕೂ ಬಂದಂತೆ ತೋರಲಿಲ್ಲ. ಎಲ್ಲ ಅವನ ಸುತ್ತ ಗುಂಪು ಕೂಡಿದ್ದರು. ಆತ ಅವರ ಗುಂಪನ್ನು ಬಿಡಿಸಿ ದಾರಿ ಮಾಡಿಕೊಂಡು ಗಂಭೀರವಾಗಿ ಬಾಗಿಲ ಕಡೆ ಹೋಗುತ್ತಿದ್ದ. ಮುಖದಲ್ಲಿ ಕಂಡೂ ಕಾಣದಂತೆ ಮುಗುಳ್ನಗೆ. ನಾನು "ಅಯ್ಯಾ, ಒಂದು ನಿಮಿಷ ಬಂದು

ಹೋಗುತ್ತೀಯಾ ?” ಎಂದು ಕೇಳಿದೆ. ಆತ ಮಾತಿಲ್ಲದೆ ಹತ್ತಿರ ಬಂದ. “ನಿನ್ನ ಹೆಸರೇನಪ್ಪ ?” “ಬಸವ.” ಅದೇ ಅವನಾಡಿದ ಮೊದಲ ಮಾತು. ಮಾತು ಎಂದೆನೇ ? ಗೀತ. ಅಷ್ಟು ಮಧುರ. “ಯಾವ ಊರು ? ಯಾರ ಮನೆ ?” “ನನ್ನದು ಯಾವ ಊರೂ ಅಲ್ಲ, ಯಾರ ಮನೆಯೂ ನನ್ನದಲ್ಲ.” ಅಪರೂಪದ ಉತ್ತರ. “ಇಲ್ಲಿ ತಂಗಿರುವುದೆಲ್ಲಿ ?” “ಇಲ್ಲಿಗೆ ಬಂದದ್ದೇ ಈಗ. ನೆಲೆ ಇಲ್ಲ.” “ನಮ್ಮೊಂದಿಗಿರುತ್ತೀಯಾ ?’’ “ಇರುತ್ತೇನೆ, ಕೈತುಂಬ ಕೆಲಸ ಕೊಟ್ಟರೆ.’’ “ಸಂಬಳ ?” “ಎರಡು ಹೊತ್ತು ಊಟಕ್ಕಾಗುವಷ್ಟು.” “ಸರಿ, ಇಂದಿನಿಂದಲೇ ಕೆಲಸ. ಗಣಕನಾಗು. ನಮ್ಮ ಮನೆಯಲ್ಲಿ ಸದ್ಯಕ್ಕೆ ಉಳಿ. ಆ ಮೇಲೆ ಮುಂದಿನ ಮಾತು.” ಆಯಿತು ಎಂದು ನನ್ನ ಹಿಂದೆ ಬಂದ. ನಮ್ಮ ಮನೆಯನ್ನು ಪ್ರವೇಶಿಸಿದ, ನಮಗೆ ನೆಲೆಯಾದ.

## ೫. ಪಶುಪತಿ ಶಾಸ್ತ್ರಿ

ಬಸವಣ್ಣ ಅನ್ನಬೇಡಿ, ಬಸವ ಅನ್ನಿ. ಅವನು ಯಾವ ಸೀಮೆ ಅಣ್ಣ, ಯಾರಿಗೆ ಅಣ್ಣ? ನೋಡಿ, ಅವನ ವಿಷಯ ಮಾತಾಡಬೇಕು ಅಂದರೆ ನನಗೆ ಆಗೊಲ್ಲ. ಅವನ ಹೆಸರೆತ್ತಿದರೆ ಕೋಪ ಬಂದು ಮೈಯೆಲ್ಲ ಉರಿಯುತ್ತೆ. ಶತ್ರು ಸ್ವಾಮಿ, ಅವನು, ನಮಗೆಲ್ಲ ಪರಮ ಶತ್ರು.

ಸುಮ್ಮನೆ, ಮಾತಿಗೆ ಹೇಳುತ್ತೇನೆ. ಈಗ ನನ್ನ ವಯಸ್ಸೆಷ್ಟು? ಐವತ್ತು. ಅವನಿಗೆ ನನ್ನ ಅರ್ಧದಷ್ಟೂ ವಯಸ್ಸಾಗಿಲ್ಲ. ಮೊನ್ನೆ ಮೊನ್ನೆ ಇಲ್ಲಿಗೆ ಬಂದು ಕೆಲಸಕ್ಕೆ ಸೇರಿದ. ನಿನ್ನೆಯೋ ಮೊನ್ನೆಯೋ ನಡೆದ ಹಾಗೆ ಇದೆ ಆ ಘಟನೆ. ಅವತ್ತು ಏಕೋ ಏನೋ ನಮ್ಮ ಗ್ರಹಚಾರ ಕೆಟ್ಟು ಲೆಕ್ಕ ತಪ್ಪಿತ್ತು. ಮಹಾರಾಜನ ಹಾಗೆ ಇಲ್ಲಿಗೆ ಬಂದ. ನೇರವಾಗಿ ಒಳಕ್ಕೆ ಬಂದು ನಮ್ಮ ಕೈಯಲ್ಲಿದ್ದ ಓಲೆಗರಿ ಕಟ್ಟನ್ನು ಕಸಿದುಕೊಂಡ. ಕೂಡಿ ಕಳೆದು ಮಾಡಿದ. ಲೆಕ್ಕ ಸರಿ ಹೋಯಿತು. ನಮಗೆಲ್ಲ ಸಂತೋಷವೂ ಆಯಿತು. ಬೆಪ್ಪರು ಸ್ವಾಮಿ ನಾವು, ಬೆಪ್ಪರು. ನಾವೇ ನಾಲ್ಕುಜನ ನಿಧಾನವಾಗಿ ನೋಡಿದ್ದರೆ, ಇನ್ನೊಂದುಸಲ ಕೂಡಿ ಕಳೆದು ಮಾಡಿದ್ದರೆ ಲೆಕ್ಕ ಸರಿಹೋಗದೆ ಏನಾಗುತ್ತಿತ್ತು? ಅಲ್ಲಿ ನಮ್ಮ ಅಧಿಕಾರಿಗಳು ಬೇರೆ ಕುಳಿತಿದ್ದಾರೆ. ಅದಕ್ಕೆ ನಮ್ಮ ಜಂಘಾಬಲವೇ ಉಡುಗಿ ಹೋಗಿತ್ತು. ಬುದ್ಧಿ ಮಂಕಾಗಿತ್ತು. ಅವನು ಲೆಕ್ಕದಲ್ಲಿ ಜಾಣ, ಇಲ್ಲಾ ಅನ್ನೋಲ್ಲ. ಗುಣಕ್ಕೆ ಯಾಕೆ ಮತ್ಸರ? ಆದರೆ ಲೋಕದಲ್ಲಿ ಯಾರೂ ಮಾಡದ್ದನ್ನ ನಿಮ್ಮ ಬಸವ ಮಾಡಿ ಬಿಡಲಿಲ್ಲ ಅಂತ ಹೇಳೋಕೆ ಹೊರಟೆ ಅಷ್ಟೆ.

ನಮ್ಮ ಬೊಕ್ಕಸದ ಅರಸರು ಇಲ್ಲೇ ಕುಳಿತಿದ್ದರು ಅಂದೆನಲ್ಲ, ಸಿದ್ಧ ದಂಡನಾಥರು, ಅವರ ಮೇಲೆ ಇವನು ಏನೋ ಮಂಕುಬೂದಿ ಎರಚಿಬಿಟ್ಟ. ನಗಬೇಡಿ, ಪ್ರಮಾಣವಾಗಿ ಹೇಳುತ್ತೇನೆ. ಇಲ್ಲದೇ

ಹೋದರೆ ಅವರು ಈ ಬಸವನನ್ನು ಕರೆದುಕೊಂಡು ಹೋಗಿ ಮನೇಲಿ ಇಟ್ಟುಕೊಳ್ಳೋದು ಅಂದ್ರೆ ಏನು ? ನನ್ನ ನೋಡಿ ಸ್ವಾಮಿ, ಇಲ್ಲಿ, ಇಲ್ಲೇ ಮೂವತ್ತು ವರ್ಷ ದುಡಿದಿದೀನಿ. ಹರಕು ಧೋತರ, ಹರಕು ಮೇಲು ವಸ್ತ್ರ. ಬಂದು ಸೇರಿದ ದಿನ ಗಣಕ ಅಂತ ಕರೆದರು, ಇವತ್ತೂ ಬರೀ ಗಣಕನೇ. ಅವನೋ ? ಬಂದ ದಿನ ಗಣಕ, ಮೂರನೇ ವರ್ಷ ಮಹಾ ಗಣಕ, ಇವತ್ತು ಗಣಕಾಧಿಪತಿ ! ಅವನು ಹೇಳಿದ ಹಾಗೆ ನಾವು ಕೇಳಬೇಕು !

ಇನ್ನು ಅವನ ಬಟ್ಟೆ ಬರೆ ಆಭರಣ ನೋಡಬೇಕು ನೀವು. ಅವೆಲ್ಲ ಬಂದದ್ದು ಎಲ್ಲಿಂದ ? ಎಲ್ಲಾ ಸಿದ್ಧದಂಡನಾಥರವು ಅಂತಾರೆ. ನನಗೆ ಗೊತ್ತಿಲ್ಲ ಸ್ವಾಮಿ. ಇಲ್ಲದ ಅನ್ಯಾಯ ಆಡಿ ನಾನು ಯಾಕೆ ನರಕಕ್ಕೆ ಹೋಗಲಿ ? ತಿಳಿಯದವರು ಅರಸರ ಬೊಕ್ಕಸದ್ದೇ ಎಲ್ಲಾ ಹಣ ಅಂತಾರೆ. ಹೌದು ಅಂದರೆ ಹೌದು, ಅಲ್ಲ ಅಂದರೆ ಅಲ್ಲ. ನನಗ್ಯಾಕೆ ಸ್ವಾಮಿ, ಅವರಿವರ ವಿಷಯ ?

ಇರಲಿ, ಅದೆಲ್ಲಾ ಅವರವರ ಕರ್ಮ. ಆದರೆ ನೋಡಿ, ಮಧ್ಯಾಹ್ನವಾಗ್ತಾ ಬಂತಲ್ಲ, ಅವನು ಕೆಲಸಕ್ಕೆ ಬಂದಿದ್ದಾನೆಯೆ ? ಅಲ್ಲಿ ನೋಡಿ, ಮೆತ್ತೆ ಹಾಕಿದ್ದಾರಲ್ಲ, ಅದೇ ಅವನ ಆಸನ. ನನಗೆ ಮೂವತ್ತು ವರ್ಷ ಈ ಮಣೇ ಮೇಲೆ ಕೂತು ಕೂತು ಮೂಲವ್ಯಾಧಿ ಬಂದಿದೆ ಸ್ವಾಮಿ. ಅವನಿಗೆ ಮೆತ್ತೆ. ನಾವೆಲ್ಲ ಅನಾಚಾರಿಗಳು ನೋಡಿ. ಅವನು ಮಹಾ ಸದಾಚಾರಿ. ನಮಗೇನು ಸ್ನಾನವೇ, ಸಂಧ್ಯಾ ವಂದನೆಯೇ ? ಎದ್ದು ಮುಖಕ್ಕೂ ನೀರು ಹಾಕದೆ ಇಲ್ಲಿಗೆ ಬಂದು ಬಿಡುತ್ತೇವೆ. ಅವನು ? ಬೆಳಗ್ಗೆ ಎದ್ದು ಮಧ್ಯಾಹ್ನದವರೆಗೂ ಶಿವ ಪೂಜೆ ಮಾಡ್ತಾನಂತೆ. ಆಮೇಲೆ ಜಂಗಮರಿಗೆ ಊಟ ಹಾಕಬೇಕಂತೆ. ಆಮೇಲೆ ಪುಷ್ಕಳವಾಗಿ ಊಟ ಮಾಡಿ ವೀಳ್ಯ ಮೆಲ್ಲುತ್ತಾ ಬರುತ್ತಾನೆ. ಬಂದು ಕೂತು ಇಲ್ಲೇ ತೂಕಡಿಸುತ್ತಾನೆ. ಅದಾದ ಮೇಲೆ ಒಂದಿಷ್ಟು ಕರ ಪರ ಬರೆಯುತ್ತಾನೆ. ಏನು ಬರೆಯುತ್ತಾನೆ ? ಒಂದು ಶಾಸ್ತ್ರವೇ,

ಕಾವ್ಯವೇ ?–ಕೊನೆಗೆ ಲೆಕ್ಕವೇ, ಪತ್ರವೇ? ಉಹುಂ. ಶುದ್ಧ ಕೆಲಸಕ್ಕೆ ಬಾರದ ಹರಟೆ. ಪದ್ಯಕ್ಕೆ ಪದ್ಯ ಅಲ್ಲ, ಗದ್ಯಕ್ಕೆ ಗದ್ಯ ಅಲ್ಲ, ಶುದ್ಧ ಹರಟೆ ಅಂದೆನಲ್ಲ. ಒಂದು ಪ್ರಾಸವೇ, ಒಂದು ಛಂದಸ್ಸೇ, ಒಂದು ಅಲಂಕಾರವೆ? ನಾಲ್ಕು ಜನ ಪಂಡಿತರ ಮುಂದೆ ಓದಿ ಸೈ ಅನ್ನಿಸಿಕೊಳ್ಳಲಿ. ಇವನ ಅನ್ನ ತಿನ್ನತಾರಲ್ಲ, ಅವರೆಲ್ಲ ಅದನ್ನ ಕೇಳಿದ್ದೂ ಕೇಳಿದ್ದೇ, ತಲೆತೂಗಿದ್ದೂ ತೂಗಿದ್ದೇ. ಅದನ್ನ ವಚನ ಅಂತ ಕರೀತಾರಂತೆ. ಮಾತಿಗೆ ಹೇಳ್ತೀನೆ. ನಾನು ಬಿಜ್ಜಳ ಅರಸರನ್ನ ಕುರಿತು ಮಂದಾಕ್ರಾಂತ ವೃತ್ತದಲ್ಲಿ ಎಂಥಾ ಖಂಡ ಕಾವ್ಯ ಬರೆದೆ. ಕಾಳಿದಾಸನ ತಲೇ ಮೇಲೆ ಹೊಡೆದ ಹಾಗಿದೆ ಅಂತ ಪಂಡಿತರೆಲ್ಲ ಆಸ್ಥಾನದಲ್ಲಿ ಅರಸರ ಮುಂದೆಯೇ ಹೊಗಳಿದರಲ್ಲ. ಅರಸರೂ ಮೆಚ್ಚಿ ರಾಜಸಭೆಯಲ್ಲಿ ಶಾಲು ಪೇಟ ಎಲ್ಲ ಕೊಟ್ಟರು. ಹುಂ ಏನಾದರೇನು ? ನನಗೆ ಮಣೆ, ಅವನಿಗೆ ಮೆತ್ತೆ. ಅವನಿಗೆ ದೊಡ್ಡ ಕೆಲಸ ಆಗೇ ಹೋಯ್ತು, ನಾನು ಇಲ್ಲೇ ಕುಳಿತಿದೀನಿ. ಹೋಗಲಿ, ಏನು ಹೇಳ್ತಾ ಇದ್ದೆ–ಹುಂ ಅವನ ಕೆಲಸ. ಸೂರ್ಯ ಪಶ್ಚಿಮಕ್ಕೆ ವಾಲೋಕಿಲ್ಲ, ಹೊರಟ ಮನೆಗೆ. ಮತ್ತೆ ಸ್ನಾನ ಅಂತೆ, ಶಿವಪೂಜೆಯಂತೆ, ಜಂಗಮರಿಗೆ ಊಟ ಅಂತೆ. ಇದೆಲ್ಲ ಯಾರಪ್ಪನ ಮನೆ ದುಡ್ಡಿನಿಂದ ನಡೆಯುತ್ತೆ ಅಂತೀರಿ ?

ಹೋಗಲಿ ಬಿಡಿ. ಅವನು ಈಗ ನಮ್ಮ ಹಿರಿಯ ಅಧಿಕಾರಿ. ಅವನನ್ನು ಬಯ್ದು ಬದುಕೋಕಾಗುತ್ಯೆ? ಮುಖ್ಯ ಎಲ್ಲದಕ್ಕೂ ಪುಣ್ಯ ಬೇಕು.

## ೬. ಚಂದ್ರಚೂಡ ಶಾಸ್ತ್ರಿ

ಬಸವಣ್ಣನವರು ಇನ್ನೂ ಬಂದಿಲ್ಲ. ಬರುತ್ತಾರೆ, ಇನ್ನೇನು ಬಂದರು. ಅವರು ನಮ್ಮ ಹಾಗೆ ಇಡೀ ದಿನ ಗುಣಿಸಿ ಭಾಗಿಸಿ ಮಾಡ ಬೇಕಾಗಿಲ್ಲ. ಅವರ ಬುದ್ಧಿ ಪಾದರಸ. ನಾವು ಹಗಲೆಲ್ಲಾ ಕೂಡಿ ಕಳೆದು ಗುಣಿಸಿ ಎಣಿಸಿ ಮಾಡುವುದನ್ನು ಅವರು ಎರಡು ಗಳಿಗೆಯಲ್ಲಿ ಮಾಡಿ ಮುಗಿಸುತ್ತಾರೆ. ಅಷ್ಟಲ್ಲದೆ ಅವರು ಬೊಕ್ಕಸದ ಅಧಿಕಾರಿ ಗಳಿಗೆ, ಮಹಾರಾಜರಿಗೆ ಅಚ್ಚುಮೆಚ್ಚಿನವರಾದರೆ ?

ಅವರು ವಾಟ ಮೇಜಿನ ಮುಂದೆ ಕುಳಿತಿರುತ್ತಾರೆ. ಎದುರಿಗೆ ಓಲೆ, ಕಂಠ ಎರಡೂ ಇರುತ್ತವೆ. ಬರೆಯುತ್ತ ಇರುವುದಿಲ್ಲ. ಸುತ್ತಮುತ್ತ ನೋಡುತ್ತಲೂ ಇರುವುದಿಲ್ಲ. ಕಣ್ಣು ಅರ್ಧ ಮಾತ್ರ ತೆರೆದಂತೆ ಇರುತ್ತದೆ. ಮುಚ್ಚಿದ ಅರ್ಧ ಒಳಗೆ ಏನನ್ನೋ ನೋಡುತ್ತಾ ಇರುವಂತೆ ಕಾಣುತ್ತದೆ. ಏನೋ ಗುಣಿಗುಣಿಸುತ್ತಾ ಇರುವುದೂ ಉಂಟು. ಬರೆಯುತ್ತಿದ್ದರೂ, ಲೆಕ್ಕ ಬರೆಯುತ್ತಿಲ್ಲ, ಏನೋ ಪದ್ಯ ಬರೆಯುತ್ತಾರೆ ಎನ್ನುತ್ತಾರೆ. ಅವರು ಬರೆಯುವುದು ನಮಗೆ ಅರ್ಥ ವಾಗುತ್ತದೆಯೋ ಇಲ್ಲವೋ ಎಂದುಕೊಂಡಿದ್ದೆ. ಅವರು ತುಂಬ ದೊಡ್ಡವರು, ದೊಡ್ಡ ವ್ಯಕ್ತಿ ಎಂದು ಅನೇಕರು ಹೇಳುತ್ತಾರೆ. ಅಂಥ ದೊಡ್ಡವರು ಬರೆಯುವುದು ನಮ್ಮಂಥ ಅರ್ಧಂಬರ್ಧ ತಿಳಿದವರಿಗೆ ತಿಳಿಯುತ್ತದೆಯೋ ಇಲ್ಲವೋ ಎಂದು ಕೊಂಡಿದ್ದೆ. ನಮಗೂ ತಿಳಿಯು ತ್ತದೆ. ಸೊಗಸಾಗಿ ಬರೆಯುತ್ತಾರೆ. ಪದ್ಯವೂ ಅಲ್ಲ, ಗದ್ಯವೂ ಅಲ್ಲ. ಏನೆಂದು ಕರೆಯಬೇಕೋ ಇನ್ನೂ ಅವರಿಗೇ ಗೊತ್ತಿಲ್ಲವಂತೆ. ಮನಸ್ಸಿನಲ್ಲಿ ಏನಾದರೂ ಭಾವನೆ ಬಂದರೆ ಬರೆದಿಡುತ್ತಾರಂತೆ. ಹಾಗೆಂದು ಅವರೇ ಹೇಳಿದ್ದು.

ಯಾರೋ ಸಣ್ಣ ಮಾತಾಡಿದರು. ಸಣ್ಣ ಜನ–ದೊಡ್ಡ ಮಾತು ಹೇಗಾಡುತ್ತಾರೆ ? ಇವನು ಬೊಕ್ಕಸದ ದುಡ್ಡು ತಿನ್ನುತ್ತಾನೆ

ಎಂದರು. ಅದು ಅವರ ಕಿವಿಗೂ ಬಿತ್ತು. ಮನಸ್ಸಿಗೆ ತುಂಬಾ ನೋವಾಯಿತಂತೆ. ಆಗದೆ ಇರುತ್ತದೆಯೆ? ತುಂಬಾ ಮೃದುವಾದ ಮನಸ್ಸಿನ ಮನುಷ್ಯ. ಆಗ ಏನೋ ಗುರುತು ಹಾಕುತ್ತಿದ್ದರು. ಮುಖದ ತುಂಬಾ ಯಾತನೆಯ ಮೋಡ. ಒಂದೆರಡು ಹನಿಯೂ ಉದುರಿತು. ಸಣ್ಣ ಜನದ ಮಾತನ್ನ ಮನಸ್ಸಿಗೆ ತಂದುಕೊಂಡು ಕೊರಗು ಹತ್ತಿಸಿಕೊಳ್ಳಬೇಡಿ ಎಂದೆ. ಅವರು ಬರೆದಿದ್ದುದನ್ನು ಓದಿದರು. ಅದೇ ಮಾತು ನೆನಪಿಲ್ಲ. ಸಾರಾಂಶ ಹೀಗೆ: "ಹರಿಯುವ ಹಾವಿಗೂ ಅಂಜುವುದಿಲ್ಲ. ಉರಿಯ ನಾಲಗೆಗೂ ಅಂಜುವುದಿಲ್ಲ. ಕತ್ತಿಯ ಮೊನೆಗೂ ಅಂಜುವುದಿಲ್ಲ. ಒಂದಕ್ಕೆ ಮಾತ್ರ ಅಂಜುತ್ತೇನೆ, ಒಂದಕ್ಕೆ ಮಾತ್ರ ಅಳುಕುತ್ತೇನೆ. ಪರಸ್ತ್ರೀಗೆ ಅಂಜುತ್ತೇನೆ, ಪರ ಧನಕ್ಕೆ ಅಂಜುತ್ತೇನೆ. ಅವೆರಡೂ ಕೆಟ್ಟವು. ಏಕೆ ಅಂಜುತ್ತೀ ಎಂದರೆ? ಹಿಂದೆ ರಾವಣ ಪರಸ್ತ್ರೀಗೆ ಆಸೆಪಟ್ಟ. ಅವನೇನಾದ? ಕೌರವ ಪರಧನಕ್ಕೆ ಆಸೆ ಪಟ್ಟ. ಅವನಿಗೆ ಬಂದ ಗತಿ ಎಂಥದು? ಆದ್ದರಿಂದ, ದೇವರೇ, ಅವುಗಳ ತಂಟೆ ನನಗೆ ಬೇಡ. ಅವರಿಗಾದ ಗತಿ ನನಗಾಗುವುದೂ ಬೇಡ." ಎಂಥ ಮಾತು! ಮಾಣಿಕ್ಯ. ಇವು ಅವರಿಗೆ ಮಾತ್ರ ಮಾತೆ? ನಮಗೂ ಅಲ್ಲವೆ?

ಆತ ಅಂಥವರೇ ಸ್ವಾಮಿ. ಶುದ್ಧ ಅಪರಂಜಿ. ಕೈ ಶುದ್ಧ, ಬಾಯಿ ಶುದ್ಧ, ಶುಚಿವ್ರತ ಸ್ವಾಮಿ. ಈಗ ಕತ್ತಲಾಗುತ್ತಿದೆ. ಅವರು ಬರಲಾರರು. ಅವರಿದ್ದರೆ ಈ ಬೊಕ್ಕಸದ ತುಂಬ ಬೆಳಕು. ಮತ್ತೆ ಬನ್ನಿ, ಕಾಣಬಹುದು. ಕಾಣಬೇಕು. ಅವರಂಥವರನ್ನು ಕಾಣದಿದ್ದರೆ ಮನುಷ್ಯತ್ವದಲ್ಲಿ ನಿಮಗೆ ನಂಬಿಕೆ ಉಳಿಯುತ್ತದೆಯೋ ಸ್ವಾಮಿ? ಖಂಡಿತ ಬಂದು ನೋಡಿ.

## ೭. ಸಿದ್ಧರಾಮ

ಬಸವಣ್ಣನವರ ವಿಷಯ ನಾನು ಅವರಿವರಿಂದ ಬೇಕಾದಷ್ಟು ಕೇಳಿದ್ದೆ. ನನ್ನ ಕೆಲಸವೇ ನನಗೆ ಕೈತುಂಬ ಇತ್ತು. ಹೀಗಾಗಿ ಒಂದು ಹೆಜ್ಜೆ ಕಲ್ಯಾಣಕ್ಕೆ ಹೋಗಿ ನಾನೇ ಅವರ ದರ್ಶನ ಪಡೆದು ಬರಲು ಸಾಧ್ಯವಾಗಿರಲಿಲ್ಲ. ನಾನು ಅಲ್ಲಿಗೆ ಹೋಗಲೇ ಬೇಕಾದ ಸಂದರ್ಭವನ್ನು ಒದಗಿಸಿದವರು ಪ್ರಭುದೇವರು.

ಕಲ್ಯಾಣಕ್ಕೇ ಎಂದು ಹೊರಟಿದ್ದಂತೆ ಅಲ್ಲಮ ಪ್ರಭುದೇವರು. ದಾರಿಯಲ್ಲಿ ನಮ್ಮ ಸೊನ್ನಲಿಗೆಗೆ ಬಂದರು. ನಾವೆಲ್ಲ ಭಕ್ತರು ಒಂದಾಗಿ ಕೆರೆ ತೋಡಿಸುತ್ತಿದ್ದೆವು. ಆಗಷ್ಟೇ ದೇವಾಲಯದ ಕೆಲಸ ಮುಗಿಸಿದ್ದೆವು. ಜನ ದೇವರ ದರ್ಶನ ಮಾಡಲಿ ಎಂದು ದೇವಾಲಯ; ದೇವಾಲಯಕ್ಕೆ ಬರಲಾರದ ಪಶುಪಕ್ಷಿಗಳಿಗೆ ಎಂದು ಕೆರೆ. ಪ್ರಭುದೇವರಿಗೆ ಇದೆಲ್ಲ ರೇಜಿಗೆಯ ಕೆಲಸವಾಗಿ ಕಂಡಿತು. ನನಗೂ ಕಾಣಲು ಶುರುವಾಗಿತ್ತು. ಇದು ಬೇಡ ಅಂದರು. ಸರಿ ಎಂದೆ. ಪ್ರಭುದೇವರು ತುಂಬ ತಿಳಿದವರಾಗಿ ಕಂಡರು. ಇಷ್ಟಲಿಂಗದ ವಿಷಯ ತಿಳಿಸಿ ಎಂದೆ. ಅವರು "ಇಷ್ಟಲಿಂಗದ ಸೂಕ್ಷ್ಮವನ್ನು ತಿಳಿದವರು ಬಸವಣ್ಣನವರು, ಅವರಲ್ಲಿಗೆ ಹೋಗೋಣ, ಅವರು ನಿನಗೆ ತಿಳಿಸಿಕೊಡುತ್ತಾರೆ" ಎಂದರು. ನನಗೆ ಆಶ್ಚರ್ಯವಾಯಿತು. ಅಲ್ಲಮಪ್ರಭು ನಮ್ಮಲ್ಲಿಗೆ ಬರುವವರೆಗೆ ನಾನು ಅಲ್ಪಸ್ವಲ್ಪ ಸಾಧನೆ ಮಾಡಿದವನು, ಅಲ್ಪಸ್ವಲ್ಪ ತಿಳಿದುಕೊಂಡವನು ಎಂಬ ಭಾವನೆ ನನಗಿತ್ತು. ಅವರು ಬಂದ ಮೇಲೆ ಅವರೊಡನೆ ಜಿಜ್ಞಾಸೆ ನಡೆದ ಮೇಲೆ ಅವರು ಜ್ಞಾನದ ಸೂರ್ಯ, ನಾವೆಲ್ಲ ಹಣತೆಗಳೂ ಅಲ್ಲ ಎಂಬ ಭಾವನೆ ಬೇರೂರಿತು. ಕೊನೆಗೆ ಅಂಥ ಸೂರ್ಯ ತನಗೂ ಸೂರ್ಯರಾದವರು ಇದ್ದಾರೆ ಎನ್ನುತ್ತಿದ್ದಾರೆ! ಅಂಥ ವ್ಯಕ್ತಿಯನ್ನು ನೋಡಲೇ ಬೇಕು ಎನ್ನಿಸಿತು. ಪ್ರಭುವಿನ ಜೊತೆಯಲ್ಲಿ ನಡೆದೆ. ದಾರಿಯಲ್ಲಿ ಅವರು ಹೇಳಿದರು– ಬಸವಣ್ಣ ದಾಸೋಹದಲ್ಲಿ ತನ್ನನ್ನು ಮರೆತು ನಿಶ್ಚಿಂತ ನಿವಾಸಿಯಾಗಿದ್ದಾನೆ ಎಂದು.

ಹಾಗೆಂದರೇನು ಎಂಬುದು ಕಲ್ಯಾಣವನ್ನು ಸೇರಿದ ಮೇಲೆಯೇ ಅರ್ಥವಾದದ್ದು. ನಾನು 'ಕರ್ಮಿ' ಎಂದಿದ್ದರು ಪ್ರಭು. ಇಲ್ಲಿ ನೋಡಿದರೆ ಬಸವಣ್ಣ ಭಕ್ತ. ಶಿವನ ಪೂಜೆ, ಶಿವನ ಭಕ್ತರ ಪೂಜೆ ಮಧ್ಯೆ ಮಧ್ಯೆ ಅರಮನೆಯ ಕೆಲಸ ಇವುಗಳಲ್ಲಿ ಮುಳುಗಿ ಹೋಗಿದ್ದರು, ಅವರು. ಭಕ್ತರಿಗೆ ಊಟ ಹಾಕುವುದೇ ದಾಸೋಹ ಎಂದು ಸುತ್ತ ಇದ್ದವರು ಅರ್ಥ ಹೇಳಿದರು. ಸುತ್ತ ಇದ್ದ ಜನಗಳ ಸಂಖ್ಯೆ ತೀರ ಹೆಚ್ಚು ಎಂದು ನನಗೆ ಅನ್ನಿಸಿತು. ಪ್ರಭುವಿನಂಥ ಜ್ಞಾನಿ ಮನೆಯ ಬಾಗಿಲಲ್ಲಿ ನಿಂತಿದ್ದರೂ ಬಂದು ಕಾಣಲಾರದಷ್ಟು ಕಾರ್ಯಮಗ್ನತೆ ಅವರಿಗೆ. ಕೊನೆಗೊಮ್ಮೆ ವಿಷಯ ತಿಳಿದಾಗ ಬಂದರು, ಓಡೋಡಿ ಬಂದರು. ತಾವು ದೊಡ್ಡ ಅಧಿಕಾರಿಯಾಗಿದ್ದರೂ ಜೋಗಿಯಂತೆ ಕಾಣುತ್ತಿದ್ದ ಪ್ರಭುದೇವರ ಕಾಲು ಮುಟ್ಟಿ ನಮಸ್ಕಾರ ಮಾಡಿ ಕ್ಷಮೆ ಕೇಳಿದರು. ಪ್ರಭುದೇವರೊಡನೆ ನನಗೂ ಸತ್ಕಾರವಾಯಿತು.

ಆತ ನಿಜವಾದ ಭಕ್ತ. ಅವರ ವಿನಯ ವಿಶಿಷ್ಟ ರೀತಿಯದು. ಅವರ ಮನಸ್ಸೆಲ್ಲ ದೇವರಲ್ಲಿ. ಆದರೆ ಕೆಲಸ ಮಾಡದೆ ಊಟ ಮಾಡುವ ಹಕ್ಕು ಯಾರಿಗೂ ಇಲ್ಲ ಎಂಬುದು ಅವರ ಸಿದ್ಧಾಂತ. ಆದರಲ್ಲಿ ಹೇಳ ತೀರದ ನಿಷ್ಠೆ. ಜೊತೆಗೆ ಭಕ್ತರನ್ನು ತೃಪ್ತಿಪಡಿಸಬೇಕು ಎಂಬ ಗುಣ ಪಡಿಸಲಾರದ ಹುಚ್ಚು. ಮಾತಾಡಿ, ವಾದಮಾಡಿ ನನ್ನ ಕರ್ಮವನ್ನು ನಿಲ್ಲಿಸಿ ನನ್ನ ಬಾಯಿ ಮುಚ್ಚಿಸಿದ ಪ್ರಭುದೇವರು ಕೂಡ ಬಸವಣ್ಣನವರ ಈ ಹುಚ್ಚಿಗೆ ಮದ್ದು ಕಂಡುಹಿಡಿಯಲಾರದೆ ಹೋದರು ! ಮಾಡುವ ಕೆಲಸಕ್ಕೆ ಇತಿ ಮಿತಿ, ರೂಪು ರೇಷೆ ಉಂಟು. ಹುಚ್ಚು ಹೊನಲಾಗಿ ಹರಿಯುವ ಭಕ್ತಿಗೆ ಅಂಥ ಅಂಕೆ ಎಲ್ಲಿದೆ ?

ಮಿಂದು ವಿಭೂತಿ ಧರಿಸಿ ಲಿಂಗ ಪೂಜೆ ಮಾಡಿದರೆ ಎರಡು ಹೊತ್ತು ಪುಷ್ಕಳವಾಗಿ ಊಟ ಸಿಕ್ಕುತ್ತದೆ ಎಂದರೆ ಯಾರು ತಾನೆ ಭಕ್ತರಾಗುವುದಿಲ್ಲ? ಹೀಗೆ ತಾಳ ಮೇಳಗಳಿಲ್ಲದ ಒಂದು ಹುಚ್ಚು ಹೊಳೆಗೆ ಒಂದು ದಿನ ಮಹಾಪೂರ ಬಂತು. ಕಲ್ಯಾಣದಲ್ಲಿ ಸೇರಿದ್ದ ಸಾವಿರಾರು ಜನ ಭಕ್ತರನ್ನು ಅದು ಕೊಚ್ಚಿಕೊಂಡು ಹೋಯಿತು– ಅದಕ್ಕೆ ದಂಡೆ ಕಟ್ಟಿದ್ದ ಬಸವಣ್ಣನವರನ್ನೂ.

## ೮. ಚೆನ್ನಬಸವಣ್ಣ

ಅವರು ನನ್ನ ಸೋದರ ಮಾವ, ತಾಯಿಯ ತಮ್ಮ. ನನ್ನ ತಾಯಿ ಅವರಿಗೆ ಒಡಹುಟ್ಟಿದ ಅಕ್ಕ ಹೌದೋ ಅಲ್ಲವೋ ಯಾರಿಗೂ ತಿಳಿಯದು. ಅವರು ಮಾತ್ರ ತಮ್ಮ ನನ್ನು ಮಗನಿಗಿಂತ ಹೆಚ್ಚು ಅಕ್ಕರೆಯಿಂದ ನೋಡಿಕೊಳ್ಳುತ್ತಿದ್ದರು. ಹೀಗಾಗಿ ಮಾವ ನನಗೆ ಒಂದು ಲೆಕ್ಕಕ್ಕೆ ಅಣ್ಣನಂತೆಯೇ ಇದ್ದರು. ಅಷ್ಟು ಪ್ರೀತಿಯಿಂದ ನನ್ನನ್ನು ಬೆಳಸಿದರು. ಜೊತೆಗೆ ನನಗೆ ಗುರುವೂ ಆದರು.

ಬಸವಣ್ಣ ಮಾವ ನನಗೆ ಮಂತ್ರ ದೀಕ್ಷೆ ಕೊಡುವುದಕ್ಕೆ ಸಾಮಾನ್ಯಕ್ಕೆ ಒಪ್ಪಲಿಲ್ಲ. ನನಗೋ ಅವರೇ ಗುರುವಾಗಬೇಕೆಂದು ಹಟ. ನನ್ನ ಮಾವ ಎಂದು ಹೇಳುತ್ತಿಲ್ಲ, ಅಷ್ಟೊಂದು ಶುದ್ಧನಾದ ಮನುಷ್ಯನನ್ನು ನಾನು ನೋಡಿಲ್ಲ. ನುಡಿಯಂತೆ ನಡೆ. ದುಡಿದೇ ಊಟ ಮಾಡಬೇಕು. ಇದು ಅವರ ವ್ರತ. ಕರಣಿಕರಾಗಿದ್ದಾಗ ಹೇಗೋ ದಂಡಾಧಿನಾಥರಾದಾಗಲೂ ಹಾಗೇ ದುಡಿಯುತ್ತಿದ್ದರು. ಇಂದಿಗೆ ಹೇಗೆ ನಾಳೆಗೆ ಹೇಗೆ ಎಂದು ಚಿಂತಿಸಿದ್ದರೆ ಅವರ ಆರಾಧ್ಯ ದೈವ ಕೂಡಲ ಸಂಗಮನ ಆಣೆ. ದುಡಿದದ್ದೆಲ್ಲ ದಾಸೋಹಕ್ಕೆ. ಜಂಗಮವೇ ಲಿಂಗ ಎಂಬ ಉತ್ಕಟ ನಿಷ್ಠೆ. ಆ ನಿಷ್ಠೆ ಅವರನ್ನು ಭ್ರಮೆಯಾಗಿ ಕಾಡಿತು. ಹಸುಗೂಸಿನಂಥ ಮನಸ್ಸು ಅವರದ್ದು. ಕಪಟಿಗಳು ಅದರ ದುರುಪಯೋಗ ಪಡೆದರು. ಮುಳ್ಳಿನ ಮೇಲೆ ಎಳೆದ ತೆಳ್ಳನೆಯ ಬಟ್ಟೆಯಾಯಿತು ಅಂಥದೊಂದು ಬಾಳು.

ಇರಲಿ, ಏನೋ ಹೇಳುವುದಕ್ಕೆ ಹೊರಟು ಏನೇನೋ ಹೇಳಿಬಿಟ್ಟೆ. ಅವರಂಥ ಭಕ್ತರು, ಅಪ್ಪಟ ಬದುಕು ನಡೆಸುವ ಜ್ಞಾನಿಗಳು ನನಗೆ ಗುರುವಾಗಬೇಕು ಎಂಬ ಆಸೆ. ಮಾವ ತಾನೆ, ಕಾಡಿದರೆ ಒಂದು ದಿನ ಈ ಆಸೆಯನ್ನು ತುಂಬಿ ಕೊಟ್ಟಾರು ಎಂಬ ನಂಬಿಕೆ. ಒಂದು ದಿನ ಅವರು ಶಿವಪೂಜೆ ಮುಗಿಸಿಕೊಂಡು ದೇವರ ಮನೆಯಿಂದ

ಹೊರಕ್ಕೆ ಬಂದರು. ಸಾಕ್ಷಾತ್ ಶಿವನಂತೆಯೇ ಕಾಣುತ್ತಿದ್ದರು. ಬಾಗಿಲಲ್ಲಿ ನಿಂತ ನಾನು ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದೆ. ಅವರು ಕೈ ಹಿಡಿದು ಮೇಲಕ್ಕೆತ್ತಿ ಇದೇನು ಹುಚ್ಚು ಎಂದರು. ನಾನು ಹೇಳಿದೆ: "ಮಾವ, ಇದು ನೀವೇ ಪೋಷಿಸಿ ಬೆಳಸಿದ ದೇಹ. ಇದಕ್ಕೆ ನಿಮ್ಮಿಂದಲೇ ಶಿವ ದೀಕ್ಷೆಯ ಸಂಸ್ಕಾರ ದೊರಕಬೇಕು." ಏನು ಮಾಡುತ್ತಿದ್ದಾರೆ ಎಂದು ತಿಳಿಯುವ ಮೊದಲೇ ಅವರೇ ನನ್ನ ಕಾಲಿಗೆ ನಮಸ್ಕಾರ ಮಾಡಿಬಿಟ್ಟರು. ಅಷ್ಟು ದೊಡ್ಡ ಮನೆ ನನ್ನ ಸುತ್ತ ಗಿರಗಿರನೆ ತಿರುಗಿದಂತೆ, ನಾನು ನಿಂತ ನೆಲ ಬಿರುಕು ಬಿಟ್ಟಂತೆ ಅನ್ನಿಸಿ ಎಂಥ ಅನಾಹುತ ನಡೆದು ಹೋಯಿತು ಎಂದು ಗಡಗಡನೆ ನಡುಗಿ ಬಿಟ್ಟೆ. ನಾನೇನು ತಪ್ಪು ಮಾಡಿದೆ, ನನಗೆ ಎಂಥ ನರಕ ಸೃಷ್ಟಿಸಿ ಬಿಟ್ಟಿರಿ ಎಂದು ಗಟ್ಟಿಯಾಗಿ ಕೂಗಿಕೊಂಡೆ. ಅವರು ಮೈದಡವಿ ಸಮಾಧಾನ ಮಾಡುತ್ತಾ ಹೇಳಿದರು—"ಯಾರಿಗೂ ಉಪದೇಶ ನೀಡುವ ಯೋಗ್ಯತೆ ನನಗಿಲ್ಲ. ತತ್ವವನ್ನು ಹುಡುಕುವವರ ತೊತ್ತು ನಾನು. ನೀನು ತತ್ವಾನ್ವೇಷಿಯಾಗಿದ್ದೀಯೆ. ಆದ್ದರಿಂದ ನಿನಗೂ ನಾನು ತೊತ್ತು ಮಾತ್ರ. ನಾನು ಯಾರಿಗೂ ಗುರುವಲ್ಲ. ಎಲ್ಲ ಶಿಷ್ಯರ ಶಿಷ್ಯ ನಾನು. ಶಿಷ್ಯನಿಗೆ ಗುರು ಉಪದೇಶ ಮಾಡಬೇಕು. ಹಾಗಲ್ಲದೆ ಶಿಷ್ಯನೇ ಗುರುವಿಗೆ ಉಪದೇಶ ಮಾಡುವುದುಂಟೆ? ನಾನು ಶಿಷ್ಯ, ಉಪದೇಶ ಪಡೆಯುವವನು. ನೀವೆಲ್ಲ ಶಿವಸ್ವರೂಪಿಗಳು." ನಾನು ಅದನ್ನೇ ಬಲವಾಗಿ ಹಿಡಿದು ಬಿಟ್ಟೆ. ನಾವು ಶಿವಸ್ವರೂಪಿಗಳಾದ ಮೇಲೆ ನಾವು ಹೇಳಿದಂತೆ ನೀವು ಮಾಡಲೇ ಬೇಕಷ್ಟೆ. ನೀವು ಉಪದೇಶ ಕೊಟ್ಟೇ ತೀರಬೇಕು ಎಂದುಬಿಟ್ಟೆ. ಅವರಿಗೆ ಬೇರೆ ದಾರಿ ಇಲ್ಲ ವಾಯಿತು. ನೀನು ಏನು ಹೇಳುತ್ತೀಯೋ ಅದೇ ಮಹಾಪ್ರಸಾದ ಎಂದರು. ಅಷ್ಟಕ್ಕೆ ನಿಲ್ಲದೆ ನಾನು ನಾಚುವಂತಹ ಇನ್ನೊಂದು ಮಾತು ಹೇಳಿ ಬಿಟ್ಟರು. "ತನ್ನ ರೂಪನ್ನು ನೋಡಿಕೊಳ್ಳಬೇಕು ಎಂದು ಕನ್ನಡಿಯ ಹತ್ತಿರಕ್ಕೆ ಹೋದರೆ ಆ ಕನ್ನಡಿ ರೂಪನ್ನು ತೋರಿಸ

ಬೇಕಲ್ಲದೆ ಬೇಕು ಬೇಡ ಎಂದು ಹೇಳುವ ಸ್ವಾತಂತ್ರ್ಯ ಅದಕ್ಕುಂಟೆ? ಅಲ್ಲದೆ ಸಂಯೋಗ ಕಾಲದಲ್ಲಿ ಪತಿಯು ಸತಿಯನ್ನು ಕುರಿತು ನೀನೇ ಪತಿಭಾವನನ್ನು ತಾಳು ಎಂದು ಅಪ್ಪಣೆ ಮಾಡಿದರೆ ಅವಳು ಆಗುವುದಿಲ್ಲ ಎಂದು ಹೇಳುವುದಕ್ಕುಂಟೆ? ಹಾಗೆಯೇ ಗುರುವಾದ ನೀನು ಶಿಷ್ಯ ನಾದ ನನ್ನನ್ನು ಗುರುವಾಗು ಎಂದು ಅಪ್ಪಣೆ ಮಾಡಿದರೆ ಹೇಗೆ ಇಲ್ಲ ಎನ್ನಲಿ? ಇಗೋ ಉಪದೇಶ" ಎಂದು ನಿಂತ ನೆಲೆಯಲ್ಲೇ ಮಂತ್ರ ದೀಕ್ಷೆ ನೀಡಿದರು. ನನ್ನ ಒಳಗೆಲ್ಲ ಜಗ್ಗೆಂದು ಬೆಳಗಿದಂತಾಯಿತು. ಅಂದಿನಿಂದಲೂ ಅವರು ನಡೆಯುತ್ತಿರುವ ಬೆಳಕಿನ ಹೆಜ್ಜೆಯಲ್ಲೇ ನಡೆ ಯುತ್ತಿದ್ದೇನೆ.

ಆ ಒಂದು ಘಟನೆಯಿಂದ ಅವರು ನನ್ನ ಮನದಂಗಳದಲ್ಲಿ ಅತ್ಯಂತ ಎತ್ತರದ ವ್ಯಕ್ತಿಯಾಗಿ ಬೆಳೆದು ನಿಂತುಬಿಟ್ಟಿದ್ದಾರೆ. ಲೋಕದಲ್ಲಿ ಯೋಗ್ಯತೆ ಇರುವ ಇಲ್ಲದಿರುವ ಪ್ರತಿಯೊಬ್ಬರೂ ಗುರುವಾಗಲು ಹಾತೊರೆಯುತ್ತಾರೆ. ಗುರುಗಳ ಗುರುವಾದ ಈ ವ್ಯಕ್ತಿಯೋ ತಾನು ಶಿಷ್ಯರೆಲ್ಲರ ಶಿಷ್ಯ ಎಂದು ಹೇಳುತ್ತಾರೆ,. ಹಾಗೆಯೇ ನಡೆಯುತ್ತಾರೆ. ಜ್ಞಾನದ ಪುಂಜವಾದ ಈತ ತನಗೆ ಏನೂ ತಿಳಿಯದು ಎನ್ನುತ್ತಾರೆ.

ನಾನೊಬ್ಬ ಅನಾಮಧೇಯ ಸಾಧಕ ಸ್ವಾಮಿ. ಆದರೆ ನನ್ನ ಮಟ್ಟಿಗೆ ಹೇಳುವುದಾದರೆ ಇಂಥ ವ್ಯಕ್ತಿ ಕೋಟಿಗೊಬ್ಬರೂ ಸಿಕ್ಕ ಲಾರರು.

## ೯. ಮಹಾದೇವಿಯಕ್ಕ

ಹರ ಕಾಮನನ್ನು ಸುಟ್ಟು ಅವನನ್ನು ಜನರ ಜೀವನದಲ್ಲಿ ಅಮರನನ್ನಾಗಿ ಮಾಡಿಬಿಟ್ಟ. ' ನಾನು ಅಂತಹ ಅಮರನನ್ನು ಅನಾಮ ಧೇಯನನ್ನಾಗಿ ಮಾಡಿದೆ ಎಂದು ಭ್ರಮಿಸಿದ್ದೆ. ಮನೆಯನ್ನು ಬಿಟ್ಟು ಅರಮನೆಯನ್ನು ಸೇರಿದವಳಿಗೆ, ಅನಂತರ ಅರಣ್ಯವೇ ಅರಮನೆಯಾದ ವಳಿಗೆ, ಅರಮನೆ ಅರಣ್ಯಗಳೆರಡರಲ್ಲೂ ಭೇದವೇನೂ ಕಾಣದೆ ಹೋದಾಗ ಮುಂದೆ ಎಲ್ಲಿಗೆ ಹೋಗುವುದು ಎಂಬ ಪ್ರಶ್ನೆ ಎದ್ದಿತು. ಚಿಲಿಮಿಲಿ ಎಂದೋದುವ ಗಿಳಿಗಳ ಸಂಗ, ಹಾಡುವ ಕೋಗಿಲೆಗಳ ಸಂಗ, ತುಂಬಿ ಹಂಸೆಗಳ ಸಂಗ ಬೇಸರವಾಯಿತು. ನನ್ನ ಹಾಗೆ ಶಿವನನ್ನೇ ಜೀವನ ಸಂಗಾತಿಯನ್ನಾಗಿ ಮಾಡಿಕೊಂಡ ಜನ ಬೇರೆ ಯಾರಾದರೂ ಇದ್ದಾರೆಯೋ ಎಂದು ಅಲ್ಲಿ ಇಲ್ಲಿ ವಿಚಾರಿಸಿದೆ. ಅಂಥ ಜನ ಕಲ್ಯಾಣದಲ್ಲಿದ್ದಾರೆ ಎಂದು ಹತ್ತಾರು ಜನ ಹೇಳಿದರು. ಅಲ್ಲಿಗೆ ಹೋಗಿ ಸೇರಿದೆ.

ಅದು ಸುಂದರವಾದ ಊರು. ನಾನು ಊರನ್ನು ಹೊಕ್ಕಾಗ ಬೆಳಕು ಮೈಮುರಿಯುತ್ತಿತ್ತು. ಬೀದಿಯ ಎರಡು ಕಡೆಗಳಲ್ಲೂ ಮಧುರವಾದ ವೇದ ಘೋಷ ಕೇಳುತ್ತಿತ್ತು. ಅಲ್ಲಿಂದಲೂ ಮುಂದೆ ಹೋದೆ. ಸುತ್ತ ಶಿವನ ಸ್ತುತಿ, ಘಂಟೆಯ ನಾದ. ಚೆನ್ನಾಗಿ ಬೆಳಕು ಹರಿದು ಜನ ಸಂಚಾರ ಹೆಚ್ಚಾದಂತೆ ನನ್ನ ಮೈಯ ಚರ್ಮ ಉರಿಯು ತ್ತಿದೆ ಎನ್ನಿಸಿತು. ಬಿಸಿಲಿಗೆ ಎಂದುಕೊಂಡು ಮುಂದೆ ಮುಂದೆ ನಡೆದೆ. ಇನ್ನೂ ಚುರು ಚುರು ಎಂದಿತು. ಇದು ಬಿಸಿಲನ್ನು ಮೀರಿದ ಉರಿ, ಬರೆ ಹಾಕಿದಂತೆ, ಹತ್ತಾರು ಕಡೆ, ನೂರಾರು ಕಡೆ ನೂರಾರು ಕಾಸಿದ ಸಲಾಕೆಗಳಿಂದ ಮುದ್ರೆಯೊತ್ತಿದಂತಾಯಿತು. ನೋಡುತ್ತೇನೆ : ಮಿಂದು ಮಡಿಯುಟ್ಟು ವಿಭೂತಿ ಧರಿಸಿದವರು ಲಿಂಗವನ್ನು ಎದೆಯ

ಮೇಲೆ ಧರಿಸಿದವರೂ ಸೇರಿದಂತೆ ಎಲ್ಲರೂ ನನ್ನ ಮೈ ಮೇಲೆ, ಸಂದಿ ಗೊಂದುಗಳ ಮೇಲೆ ಆಸೆಯ ಕಣ್ಣಾಡಿಸುತ್ತಿದ್ದಾರೆ !

ತಕ್ಷಣವೇ ನನ್ನ ಮೈಯ ಮೇಲೆ ಕಣ್ಣಾಡಿಸಿದೆ. ನನಗೊಂದು ದೇಹವಿದೆ ಎಂಬುದೇ ಈಚೆಗೆ ಮರೆತು ಹೋಗಿತ್ತು. ಈ ನನ್ನ ದೇಹ ಒಂದು ಕಾಲಕ್ಕೆ ತುಂಬ ಸುಂದರವಾಗಿತ್ತಂತೆ. ಅದು ನನಗೆ ತಿಳಿದದ್ದು ಅದರ ದೆಸೆಯಿಂದ ನನಗೆ ಅರಮನೆಯೆಂಬ ಸೆರೆಮನೆಯ ವಾಸ ಪ್ರಾಪ್ತವಾದದ್ದರಿಂದ ! ಆಮೇಲೆ ದೇಹಕ್ಕೆ ಬೆಳಕಿನ ಕವಚ ಧರಿಸಿದ್ದೆ ಎಂಬ ಭ್ರಮೆಯಲ್ಲಿದ್ದೆ. ಇಲ್ಲಿ ಜನ ತುಂಬಿದ ಊರಿನಲ್ಲಿ ಕವಚವೂ ಕಳಚಿಬಿದ್ದು ಹೋಯಿತು ! ಭ್ರಮೆಯೂ ಸೋರಿ ಹೋಯಿತು. ನನ್ನ ಪುಣ್ಯ, ನನ್ನ ಕೂದಲು ಹಿಮ್ಮಡಿಯವರೆಗೂ ಬೆಳೆದು ಇಳಿಬಿದ್ದಿತ್ತು. ಅದರಿಂದ ಮರ್ಮಸ್ಥಾನವನ್ನು ಮುಚ್ಚಿಕೊಂಡೆ. ಅರೆಬರೆ ಕಾಣುತ್ತಿದ್ದ ಮೈಯೊಳಗೆ ಇನ್ನೂ ಅರೆಬರೆ ನಾಚಿಕೆ ಸಾಯದೆ ಉಳಿದಿತ್ತು. ನಿರ್ಮೋಹದ ಬಸಿರಲ್ಲೂ ಅರೆಜೀವವಾಗಿರುವ ಮೋಹದ ಬೀಜವೇ ? ಅವಾಕ್ಕಾದೆ.

ಮುಂದೆ ನಡೆದೆ. ಜನರೆಲ್ಲ ಗುಂಪಾಗಿ ಒಂದೇ ದಿಕ್ಕಿಗೆ ಹೋಗುತ್ತಿದ್ದರು. ವಿಚಾರಿಸಿದ್ದರಲ್ಲಿ ಅಣ್ಣನವರ ಮನೆಗೆ ಎಂದು ತಿಳಿಯಿತು. ಅಣ್ಣನವರು ದೊಡ್ಡ ಭಕ್ತರು ಎಂದು ಕೇಳಿದೆ. ಸಾವಿರಾರು ಭಕ್ತರಿಗೆ ಆಶ್ರಯ ಕೊಟ್ಟಿದ್ದರು ಎಂದೂ ತಿಳಿಯಿತು. ಮನೆಯಿಲ್ಲದವಳಿಗೆ ಯಾರ ಮನೆಯಾದರೇನು ? ಅಲ್ಲಿಗೆ ನಾನೂ ನಡೆದೆ.

ಮನೆ ದೊಡ್ಡದು ಅಷ್ಟೆ. ಯಾವ ಆಡಂಬರವೂ ಇಲ್ಲ. ನಾನು ಅದಕ್ಕಿಂತ ದೊಡ್ಡ ಮನೆಯನ್ನು ಕಂಡಿದ್ದವಳು, ಅರಮನೆಯಲ್ಲೇ ಇದ್ದವಳು. ಅರಮನೆಯಲ್ಲಿದ್ದ ಅಸಂಸ್ಕೃತ ಅಲಂಕಾರಗಳೇನೂ ಇಲ್ಲಿರಲಿಲ್ಲ. ದೊಡ್ಡ ಬಾಗಿಲಲ್ಲಿ ನಿಂತವರೊಬ್ಬರು ನನ್ನ ಹೆಸರು, ಕುಲ, ಗೋತ್ರ ವಿಚಾರಿಸಿದರು. ನಾನು "ಹೆಸರು ಮಹಾದೇವಿ, ಕುಲ ಗೋತ್ರ ಒಂದೂ ಇಲ್ಲ" ಎಂದೆ. "ನಿಮ್ಮ ಹೆಸರೇನು ?" ಎಂದೂ

ಕೇಳಿದೆ. ಅವರು "ಕಿನ್ನರಿ ಬೊಮ್ಮಯ್ಯ" ಎಂದರು. ಮತ್ತೆ ಹೇಳಿದರು: "ಕುಲ, ಗೋತ್ರ ಇಲ್ಲದವರಿಗೆ ಇಲ್ಲಿ ಏನೂ ಕೆಲಸವಿಲ್ಲ." ನಾನು ನಕ್ಕು ಹೇಳಿದೆ: "ಕುಲಗೋತ್ರ ಇರುವ ಕಡೆ ನನಗೆ ಕೂಡ ಏನೂ ಕೆಲಸವಿಲ್ಲ." ಹೀಗೆ ಹೇಳಿ ನಾನು ಹೊರಡುವುದರಲ್ಲಿದ್ದೆ. ಅವರು ಮೇಲುಸಿರು ಬಿಡುತ್ತಾ "ಹೋಗಬೇಡಿ, ಶಿವನಾಣೆ, ಒಳಕ್ಕೆ ಬನ್ನಿ" ಎಂದು ಅವರೂ ಒಳಕ್ಕೆ ಓಡಿದರು. ಅವರು ಅವಸರವಸರವಾಗಿ ಒಳಕ್ಕೆ ಓಡಿಹೋಗುವಾಗ ಹೇಳಿದ್ದನ್ನು—"ಅಮ್ಮ ನಿಮ್ಮನ್ನು ಮಾತನಾಡಿಸಿ ಹುಲಿ ನೆಕ್ಕಿ ಬದುಕಿದಂತಾಯಿತು ತಾಯಿ" ಎಂದದ್ದನ್ನು—ನೆನೆದರೆ ನನಗೆ ಈಗಲೂ ನಗೆ ಬರುತ್ತದೆ.

ತುಂಬ ಜನ ಗುಂಪಾಗಿ ಕುಳಿತು ಮಾತನಾಡುತ್ತಿದ್ದ ಅಂಗಳಕ್ಕೆ ನನ್ನನ್ನು ಕರೆದು ಕೊಂಡು ಹೋದರು. ಅವರೆಲ್ಲ ತುಂಬ ತಿಳಿದವರು ಎಂದು ಹೇಳಿದರು. ನೀಳವಾದ ಗಡ್ಡ ಬಿಟ್ಟುಕೊಂಡು ತೇಜಸ್ವಿಯಾಗಿ ಕಾಣುತ್ತಿದ್ದ ಒಬ್ಬ ವ್ಯಕ್ತಿ ಎಲ್ಲರಿಗಿಂತ ಹೆಚ್ಚು ತಿಳಿದವರು ಎಂದರು. ಅವರ ಹೆಸರು ಅಲ್ಲಮ ಪ್ರಭು ಅಂತ. ಒಬ್ಬರು ತುಂಬ ತಿಳಿದವರು, ಜ್ಞಾನಿ ಎನ್ನುವುದನ್ನು, ಇವರಿಗಿಂತ ಅವರು ಹೆಚ್ಚು ಜ್ಞಾನಿ ಎನ್ನುವುದನ್ನು ಹೇಗೆ ಅಳೆಯುತ್ತಾರೋ ನನಗೆ ಇನ್ನೂ ಗೊತ್ತಾಗಿಲ್ಲ. ಅಲ್ಲಿ ನಾನು ಕೇಳಿದ್ದೆಲ್ಲ ಮಾತು, ಮಾತು, ಮಾತು. ತಲೆ ಚಿಟ್ಟುಹಿಡಿಸುವಷ್ಟು ಮಾತು. ಚಮತ್ಕಾರದ ಪ್ರಶ್ನೆ, ಅದಕ್ಕಿಂತಲೂ ಚಮತ್ಕಾರದ ಉತ್ತರ. "ನಿನಗೆ ದೇಹ ಇದೆ, ದೇಹ ಇಲ್ಲದ ದೇವರು ನಿನಗೆ ಹೇಗೆ ಗಂಡನಾದ ? ಗಂಡನಿಲ್ಲದ ಹೆಣ್ಣು ಎಂದರೆ ನಮ್ಮ ಶರಣರು ಮುನಿಯುತ್ತಾರೆ, ನಿನ್ನ ಗಂಡನ ಗುರುತು ಹೇಳುವುದಾದರೆ ಕುಳಿತಿರು, ಇಲ್ಲದಿದ್ದರೆ ಹೊರಡು"–ಹೀಗೇ ಇನ್ನೂ ಏನೇನೋ. ಮಾತು, ಮಾತು, ಮಾತು. ಕಾಮ ಬೇಸರವಾಗಿ ಬಂದವಳಿಗೆ ಮಾತು ಕಾಮವಾಗಿ ಕಂಡಿತು, ಮಾತು ಮೈಥುನವಾಗಿ ಕಂಡಿತು. ಇವರು ಮಾತನ್ನು ಮೀರಿ ಮೌನದ ಸೀಮೆಯಲ್ಲಿ ಬದುಕಬಲ್ಲ ಜನ ಅಲ್ಲ, ಇದು ನಾನು ಇರಲು

ತಕ್ಕ ಸ್ಥಳ ಅಲ್ಲ ಎಂದು ಎದ್ದು ಹೊರಟೆ. ಅಷ್ಟರಲ್ಲಿ ತುಂಬ ಆಕರ್ಷಕರಾಗಿ ಕಂಡ ಒಬ್ಬರು ಗುಂಪಿನಿಂದ ಮೇಲೆದ್ದರು. ಎದ್ದು ನಿಧಾನವಾಗಿ ನನ್ನ ಹತ್ತಿರ ಬಂದರು. 'ಅಣ್ಣನವರು, ಅಣ್ಣನವರು' ಎಂದು ಜನ ಪಿಸುಗುಟ್ಟಿದ್ದರಿಂದ ಅವರೇ ಬಸವಣ್ಣನವರು ಎಂದು ತಿಳಿದು ಕೈ ಮುಗಿದೆ. ಅವರು ಆಡಿದ್ದು ಇಷ್ಟೇ: "ಈ ತಾಯಿಗೆ ದೇಹ ಇದ್ದರೇನು? ಮನಸ್ಸಿನ ಲಜ್ಜೆಯ ನೆನಹನ್ನೇ ಈಕೆ ಸುಟ್ಟು ಹಾಕಿದ್ದಾರೆ. ದಿಗಂಬರನನ್ನು ಒಲಿದವರಿಗೆ ಕೌಪೀನದ ಹಂಗುಂಟೆ? ಈಕೆ ನನ್ನನ್ನು ಹೆತ್ತ ತಾಯಿ, ಮಹಾದೇವಿ." ತಾಯ್ತನವನ್ನೇ ಕಾಣದ ನನ್ನಲ್ಲಿ ಒಮ್ಮೆಗೇ ಮಾತೃಭಾವ ಉಕ್ಕಿ ಹರಿಯುವಂತೆ ಮಾಡಿದ ಮಹಾನುಭಾವರು ಅಣ್ಣನವರು. ಅಕ್ಕರೆಯ ಈ ಭಕ್ತಿಯ ಮಗು ಇಂದಿಗೂ ನನ್ನ ಮನಸ್ಸಿನ ಅಂಗಳದಲ್ಲಿ ಆಡುತ್ತಲೇ ಇದೆ!

## ೧೦. ಮುಕುಂದ ಪೆದ್ದಿ

ಅವನು ಆಸ್ಥಾನಕ್ಕೆ ಕಾಲಿಟ್ಟ ದಿನ ಬೀಸಿದ ಬಿರುಗಾಳಿಯನ್ನು ನೆನೆದರೇ ನನ್ನ ಮೈ ಇಂದೂ ಗಡಗಡನೆ ನಡಗುತ್ತದೆ. ಅಂದು ಅರಸರು ಆಸ್ಥಾನದಲ್ಲಿ ಶಾಸ್ತ್ರ ವ್ಯಾಖ್ಯಾನವನ್ನು ಕೇಳುತ್ತಿದ್ದರು. ನಾಲ್ಕು ಜಾತಿಗಳನ್ನು ಸಾಕ್ಷಾತ್ ಭಗವಂತನೇ ಸೃಷ್ಟಿಸಿದ್ದು ಹೌದೇ ಎಂದು ಬಿಜ್ಜಳ ಅರಸರು ಪ್ರಶ್ನಿಸಿದರು. ವೇದ ಸುಳ್ಳು ಹೇಳುತ್ತದೆಯೆ ? ಪುರುಷ ಸೂಕ್ತದಲ್ಲಿ ಹೇಳಿಲ್ಲವೇ ?– ಬ್ರಾಹ್ಮಣರು ವಿರಾಟ್ ಪುರುಷನ ಮುಖದಿಂದ ಹುಟ್ಟಿದರು ಅಂತ. ಹಾಗೇ ಕ್ಷತ್ರಿಯರು ಅದೇ ವಿರಾಟ್ ಪುರುಷನ ತೋಳಿನಿಂದ, ವೈಶ್ಯರು ತೊಡೆಯಿಂದ ಶೂದ್ರರು ಪಾದದಿಂದ ಹುಟ್ಟಿದರು ಎಂದೂ ಹೇಳಿದೆ. ಅಲ್ಲದೆ ಸಾಕ್ಷಾತ್ ಕೃಷ್ಣ ಪರಮಾತ್ಮನೇ ಭಗವದ್ಗೀತೆಯಲ್ಲಿ ಹೇಳಿದ್ದಾನೆ– ನಾಲ್ಕು ವರ್ಣಗಳನ್ನು ನಾನೇ ಸೃಷ್ಟಿಸಿದ್ದೇನೆ– ಅಂತ. ಇದನ್ನೆಲ್ಲ ಅರಸರಿಗೆ ಬಿಡಿಸಿ ಹೇಳುತ್ತಿರುವಾಗ ಅವನನ್ನು ಹಿಂದಿಟ್ಟುಕೊಂಡು ಸಿದ್ಧ ದಂಡನಾಥರು ಆಸ್ಥಾನಕ್ಕೆ ಬಂದು ಅರಸರಿಗೆ ಕೈ ಮುಗಿದರು. ಅವನು ಅರಸರಿಗೆ ಕೈ ಮುಗಿಯಲಿಲ್ಲ. ಅರಮನೆಯ ರೀತಿ ನೀತಿಗಳು ಅವನಿಗೆ ತಿಳಿಯವು ಎಂದುಕೊಂಡೆ. ಆದರೆ ಅವನು ದುರಹಂಕಾರಿ. ಆ ಮಾತು ಆಮೇಲೆ.

ಅವನು ಲೆಕ್ಕದಲ್ಲಿ ತುಂಬ ಜಾಣನಂತೆ. ಹಾಗೆಂದು ಬೊಕ್ಕಸದ ಅಧಿಕಾರಿಗಳು ಅರಸರಿಗೆ ನಿವೇದಿಸಿಕೊಂಡರು. ಸನ್ನಿಧಾನದ ಸೇವೆಯಲ್ಲಿರುತ್ತಾನೆ, ಇತರ ಕರಣಿಕರಿಗೆ ಸಹಾಯ ಮಾಡುತ್ತಾನೆ, ಅದಕ್ಕೆ ಅರಸರ ಅಪ್ಪಣೆ ಬೇಡುತ್ತೇನೆ ಎಂದರು. ಅರಸರ ಮನಸ್ಸು ಎಲ್ಲೋ ಇತ್ತು. ಬೊಕ್ಕಸದ ಅಧಿಕಾರಿಗಳ ಮಾತು ಮುಗಿದ ಮೇಲೆ ಅರಸರು ಅವನನ್ನೇ ದಿಟ್ಟಿಸಿ ನೋಡಿದರು. ಅವನೂ ಸ್ವಲ್ಪವೂ ಹೆದರಿಕೆಯಿಲ್ಲದೆ ಅರಸರನ್ನೇ ದಿಟ್ಟಿಸಿ ನೋಡುತ್ತಿದ್ದ. ಅವನು ನಿಂತ ನಿಲುವಿನಲ್ಲಿ ಸೆಡ

ವಿತ್ತು. ಅವನಿಗೆ ಮೊದಲ ಸಲ ರಾಜಸಭೆಯನ್ನು ಪ್ರವೇಶಿಸಿದವನ ಮುಖದಲ್ಲಿ ಕಾಣುವ ಬೆದರಾಗಲೀ ಬೆರಗಾಗಲೀ ಇರಲಿಲ್ಲ. ಅವನು ಸಿಂಹಾಸನದ ಸೇವೆಗೆ ಬಂದವನಂತೆ ಕಾಣುತ್ತಿರಲಿಲ್ಲ, ಸಿಂಹಾಸನವನ್ನು ಏರಲು ಬಂದವನಂತೆ ಕಾಣುತ್ತಿದ್ದ.

ಅರಸರ ಮೇಲೆ ಅವನು ಏನು ಮೋಡಿ ಬೀರಿದನೋ ಏನೋ. ಅರಸರಿಗೆ ಅವತ್ತಿನಿಂದ ಅವನನ್ನು ಕಂಡರೆ ಪಂಚ ಪ್ರಾಣ. ಮೊದಲು ಕರಣಿಕನಾಗಿ ಬಂದ. ಅವನು ಬಂದ ದಿನ ಭಯಂಕರವಾದ ಬಿರು ಗಾಳಿ ಬೀಸಿತು. ಮರಗಿಡಗಳು ಉರುಳಿದ್ದೆಷ್ಟೋ, ಎಷ್ಟು ಮನೆಯ ಮಾಡುಗಳು ಹಾರಿಹೋದುವೋ. ಇವನು ಕಾಲಿಟ್ಟ, ಏನೋ ಅಪ ಶಕುನ ಎಂದು ನಾನು ಹೇಳಿದೆ. ಅರಸರು ನಕ್ಕು ಬಿಟ್ಟರು. ಅವನು ಬಂದದ್ದಕ್ಕೂ ಬಿರುಗಾಳಿ ಬೀಸಿದ್ದಕ್ಕೂ ಏನು ಸಂಬಂಧ ಎಂದು ಬಿಟ್ಟರು.

ಏನು ಸಂಬಂಧ ಎಂಬುದು ಅವರಿಗೆ ಆಮೇಲೆ ಗೊತ್ತಾಯಿತು. ಆದರೆ ಅಷ್ಟು ಹೊತ್ತಿಗೆ ತುಂಬ ತಡವಾಗಿ ಹೋಗಿತ್ತು. ಏನೇ ನಡೆ ಯಲಿ ಅವನ ವಿಷಯಕ್ಕೆ ಅವರ ಪ್ರೀತಿ ಎಂದೂ ಕಡಮೆಯಾಗಲಿಲ್ಲ. ಅವನು ಅರಮನೆಗೆ ಬಂದರೆ ಅರಸರಿಗೆ ಕೈ ಮುಗಿಯುತ್ತಿರಲಿಲ್ಲ. ಶಿವನಿ ಗಲ್ಲದೆ ಬೇರೆ ಯಾರಿಗೂ ಕೈ ಮುಗಿಯುವುದಿಲ್ಲ ಎನ್ನುವ ಬಿಂಕ ಬೇರೆ. ಆಳುವ ಅರಸರು' ಹೋಗಲಿ ಬಿಡಿ' ಎಂದು ತೇಲಿಸಿ ಬಿಟ್ಟರು.

ಅವನಿಗೆ ಮೇಲು ಕೀಳು ಏನೂ ಇಲ್ಲ. ಬ್ರಾಹ್ಮಣರೂ ಒಂದೇ ಹೊಲೆಯರೂ ಒಂದೇ. ಅಲ್ಲ, ಅಲ್ಲ. ಒಂದೇ ಅಲ್ಲ. ಬ್ರಾಹ್ಮಣರು ಹೊಲೆಯರಿಗಿಂತ ಕೀಳು. ಒಂದು ಸಲ ಹೊಲಗೇರಿಯಲ್ಲಿ ಯಾರದೋ ಹಟ್ಟಿಯಲ್ಲಿ ಊಟಕ್ಕೆ ಹೋಗಿದ್ದ. ಊಟ ಮುಗಿಸಿ ನೇರವಾಗಿ ಅರ ಮನೆ ಹೊಕ್ಕು ರಾಜರ ಸಮ್ಮುಖಕ್ಕೂ ಬಂದು ಬಿಟ್ಟ. ಸ್ನಾನ ಇಲ್ಲ, ಮಡಿ ಇಲ್ಲ. ಆಸ್ಥಾನದಲ್ಲಿ ಗುಸುಗುಸು ಕೇಳಿಸಿತು. ರಾಜರು "ಏನು ?" ಎಂದರು. ನಮ್ಮಲ್ಲಿ ಯಾರೋ ಒಬ್ಬರು – ಹಾಂ, ನೆನ

ಪಾಯಿತು – ವಿಷ್ಣು ಭಟ್ಟರು ಎದ್ದು ಧೈರ್ಯವಾಗಿ ಹೇಳಿದರು : "ಮಹಾಪ್ರಭು, ತಮ್ಮ ದಂಡನಾಯಕರು ಈಗ ತಾನೇ ಹೊಲಗೇರಿಯಿಂದ ಬರುತ್ತಿದ್ದಾರೆ. ಅವರ ಊಟವೂ ಅಲ್ಲೇ ಆಗಿದೆ. ಅರಮನೆಗೆ ಪ್ರವೇಶಿಸುವುದಕ್ಕೆ ಮುಂಚೆ, ಪ್ರಭುಗಳ ಸನ್ನಿಧಿಯಲ್ಲಿ ಕಾಣಿಸಿಕೊಳ್ಳುವುದಕ್ಕೆ ಮುಂಚೆ ಸ್ನಾನಮಾಡಿ, ಶುದ್ಧರಾಗಿ, ಮಡಿ ಬಟ್ಟೆ ಉಟ್ಟು ಬರಬೇಕು ಅನ್ನೋ ಅಷ್ಟು ಗೌರವವನ್ನೂ ಪ್ರಭು ಸನ್ನಿಧಿಗೆ ಇವರು ತೋರಿಸಿಲ್ಲ." ಪ್ರಭುಗಳು ಗಂಭೀರವಾಗಿ, ಆದರೆ ನಾಟಕದಲ್ಲಿ ಅನ್ನೋ ಹಾಗೆ : "ಬಸವ ದಂಡನಾಯಕರೇ, ಇವರ ಮಾತು ನಿಜವೇ ?" ಎಂದು ಕೇಳಿದರು. ಆಗ ಆತ ಕೊಟ್ಟ ಉತ್ತರ, ಉತ್ತರ ಅಲ್ಲ ಸಿಡಿಲು : "ಇಲ್ಲವಲ್ಲ, ನಾನೇನು ಬ್ರಾಹ್ಮಣರ ಅಗ್ರಹಾರಕ್ಕೆ ಹೋಗಿದ್ದೆನೇ, ಹೊಲಗೇರಿಗೆ ಹೋಗಿದ್ದೆ ಎನ್ನುವುದಕ್ಕೆ ? ನಾನೇನು ವಿಷ್ಣು ಭಟ್ಟರ ಮನೆಯಲ್ಲಿ ಉಂಡೆನೆ, ಹೊಲೆಯರ ಮನೆಯಲ್ಲಿ ಉಂಡೆ ಎನ್ನುವುದಕ್ಕೆ ?" ಸಭೆಗೆ ಸಭೆಯೇ ಘೊಳ್ ಎಂದು ನಕ್ಕಿತು. ಮಹಾರಾಜರ ಮುಖ ನೋಡಿದೆವು. ಅಲ್ಲಿ ಮಂದಹಾಸ ಮನೆ ಮಾಡಿತ್ತು. ನಾನೂ ವಿಷ್ಣು ಭಟ್ಟರೂ ತಲೆ ತಗ್ಗಿಸಿ, ಸಭೆ ಯಾವಾಗ ಮುಗಿದೀತೋ ಎಂದು ಕಾದಿದ್ದು ಮನೆಗೆ ಬಂದು ಬಿಟ್ಟೆವು. ಮತ್ತೆ ರಾಜ ಸಭೆಗೆ ಕಾಲಿಟ್ಟಿಲ್ಲ.

## ೧೧. ಗಂಗಾದೇವಿ

ನಮ್ಮ ಮನೆಯವರ ವಿಷಯ ಕೇಳುತ್ತೀರಾ? ಅವರ ವಿಷಯ ನಾನು ಏನು ತಾನೆ ಹೇಳಲಿ? ನನಗೆ ಅವರ ವಿಷಯ ನಿಜವಾಗಿಯೂ ಏನೇನೂ ತಿಳಿಯದು. ಹಾಗೆ ಕೇಳಿದರೆ ನನ್ನ ವಿಷಯವೂ ಅವರಿಗೆ ಏನೂ ತಿಳಿದಿರಲಾರದು. ಒಬ್ಬರನ್ನೊಬ್ಬರು ಅರ್ಥಮಾಡಿಕೋತಾರೆ ಅಂತಾರೆ. ಅರ್ಥಮಾಡಿಕೊಳ್ಳೋಕೆ ಪ್ರಯತ್ನ ಮಾಡಬೇಕು. ಅದಕ್ಕೆ ಇಂಥ ಮನೆಯಲ್ಲಿ ಪುರುಸೊತ್ತು ಎಲ್ಲಿ? "ಏನಾದರೂ ಹೇಳಿ, ಏನಾದರೂ ಹೇಳಿ" ಅಂದರೆ ಏನು ಹೇಳಲಿ?

"ಅವರು ನಿಮ್ಮ ಮನೆಗೆ ಬಂದ ದಿನದ ಘಟನೆ ಏನೂ ನೆನಪಿಲ್ಲವೆ?" ಎಂದು ಕೇಳುತ್ತೀರಾ? ನೆನಪಿಲ್ಲದೆ ಇರುತ್ತದೆಯೆ?– ಅದೂ ಅಂಥ ದಿನ, ಅಂಥ ಘಟನೆ.

ನಮ್ಮ ತಂದೆ ಅವರನ್ನು ನಮ್ಮ ಮನೆಗೆ ಕರೆದುಕೊಂಡು ಬಂದ ಆ ದಿನ–ಇಲ್ಲ, ಮಾತು ಹೊರಡುತ್ತಿಲ್ಲ. ನೀವು ಒತ್ತಾಯ ಮಾಡಬಾರದು. ಮನಸ್ಸಿನಲ್ಲಿರುವುದನ್ನೆಲ್ಲ ಅಂಗಡಿ ಹರಡುವುದಕ್ಕಾಗುತ್ತೆಯೆ?

ನಮ್ಮ ಅಪ್ಪ ಅಮ್ಮನಿಗೆ ನಾವಿಬ್ಬರೇ ಮಕ್ಕಳು. ನಾನು, ನನ್ನ ತಂಗಿ ನೀಲಲೋಚನೆ. ಮುದ್ದಿಗೆ ಅವಳನ್ನು ಮಾಯಿ ಎನ್ನುತ್ತೇವೆ. ಅಪ್ಪನಿಗಂತೂ ನಾವೇ ಪ್ರಾಣ, ಕಣ್ಣು, ಉಸಿರು ಎಲ್ಲ. ಅಮ್ಮನ ಮಾತು ಬಿಡಿ. ಅವಳು ಅಕ್ಕರೆಯ ಮುದ್ದೆ.

ಆ ದಿನ "ಅಪ್ಪಾಜೀ" ಎನ್ನುತ್ತಾ ನಾವು ತಲೆ ಬಾಗಿಲಿಗೆ ಓಡಿದೆವು. ಅವರ ಹಿಂದೆ, ಅವರ ಮರೆಗೆ ಅಪರಿಚಿತರೊಬ್ಬರು ಇರುವುದನ್ನು ಕಂಡು ಇಬ್ಬರೂ ಮಿಂಚಿನ ವೇಗದಲ್ಲಿ ಮಾಯವಾಗುವುದರಲ್ಲಿದ್ದೆವು. ಅಪ್ಪಾಜಿ ನಗುತ್ತಾ "ಬನ್ನಿ ಮಕ್ಕಳೇ, ಮನೆಗೆ ನಂಟರು ಬಂದಿದ್ದಾರೆ"

ಎಂದರು. ನಾನು ಒಂದೇ ಕ್ಷಣ ನಿಂತು ಹಿಂದಿರುಗಿ ನೋಡಿದೆ. ಅವರು ಈ ಲೋಕದ ಸಂಟರಂತೆ ಕಾಣಲಿಲ್ಲ. ಆ ಅಪರಿಚಿತ ಪುರುಷ ರೂಪದ ತೇಜಸ್ಸಿನ ಕಣ್ಣಿನ ಕಾಂತಿ ನನ್ನನ್ನು ಜಿಂಕೆಗೊಳಿಸಿಬಿಟ್ಟಿತು. ನನ್ನ ದೇಹವೆಲ್ಲ ಒಳಮನೆಯ ಕಡೆಗೆ. ತಿರುಗಿದ ಮುಖ ಅವರ ಆಕಾರ ದಲ್ಲಿ ಬಂದಿಯಾಗಿ ಬಿಟ್ಟಿತ್ತು. ನಾನು ನಾಚಿ ನೀರಾದೆ, ಒಳಕ್ಕೆ ಹರಿದು ಹೋಗುವುದರಲ್ಲಿದ್ದೆ. ಅಷ್ಟರಲ್ಲಿ ಇನ್ನೊಂದು ಹೆಣ್ಣು ಜೀವವೂ ನನ್ನಂತೆ ನೀರಾಗಿ, ಉಕ್ಕಿ ಹರಿದು ನನ್ನಲ್ಲಿ ಸಂಗಮಗೊಂಡಿತು.

ಅವರು ನಮ್ಮ ಮನೆಯಲ್ಲೇ ನಿಂತರು. ಆದರೆ ನಮಗೂ ಅವ ರಿಗೂ ನಡುವೆ, ಅವರು ನಡೆದಾಡಿದಲ್ಲೆಲ್ಲ ಕಣ್ಣಿಗೆ ಕಾಣದ ಗೋಡೆಗಳು ಎದ್ದು ನಿಲ್ಲುತ್ತಿದ್ದುವು. ಎಂಥ ಕಟ್ಟು ನಿಟ್ಟಿನ ಮನುಷ್ಯ. ಇದು ಯಾವ ಪುರುಷ ವ್ರತ–ಹೆಣ್ಣನ್ನು ನೋಡಿದರೆ ಕಣ್ಣೇ ಮುಚ್ಚಿಹೋಗು ತ್ತದೆಯೋ ಎಂದು ನಮ್ಮಲ್ಲೇ ಮಾತಾಡಿಕೊಂಡು ನಗುತ್ತಿದ್ದೆವು. ನಾವು ನೆಲದಲ್ಲಿ, ಅವರು ಆಕಾಶದಲ್ಲಿ. ನಾವು ಎಷ್ಟು ಬೆಂದು ಬಾಯಾ ರಿದರೂ ಆ ಮುಗಿಲಿಗೆ ಕನಿಕರ ಬರಲಿಲ್ಲ. ನಾವು ಕಾಣಿಸಿಕೊಳ್ಳ ದೆಯೋ, ಕೇಳಿಸಿಕೊಳ್ಳದೆಯೋ ನಮ್ಮ ಸೇವೆ ಅವರಿಗೆ ಸಲ್ಲುತ್ತಿತ್ತು. ನಮ್ಮನ್ನು ಅವರು ನೋಡುತ್ತಿದ್ದರೋ ಇಲ್ಲವೋ ಗೊತ್ತಾಗಲೇ ಇಲ್ಲ. ನಮಗೆ ಮಾತ್ರ ಅವರು ಇಷ್ಟದೇವತೆಯಾಗಿ ಬಿಟ್ಟರು. ಅಮ್ಮ ನಮ್ಮನ್ನು ನೋಡಿ ಕಾರಣವಿಲ್ಲದೆಯೇ ನಗುತ್ತಿದ್ದಳು. ಅವಳ ಕಣ್ಣಿನ ಬೆಳುದಿಂಗಳಂತೆಯೇ ಆ ಮಿನುಗು ನಗೆಯೂ ನಮಗೆ ಹಿತವಾಗಿತ್ತು.

ಒಂದು ದಿನ ಅಪ್ಪಾಜಿ ನನ್ನನ್ನು ಹತ್ತಿರ ಕೂರಿಸಿಕೊಂಡು "ಮಗೂ, ಒಂದು ಮಾತಿದೆ" ಎಂದರು. ಅದೇ ಮೊದಲು ಅಪ್ಪಾಜಿ ಹಾಗೆ ಹೇಳಿದ್ದು. ಆದ್ದರಿಂದ ಆ ಮಾತೇ ಭಾರವಾಗಿ ತಲೆಯ ಮೇಲೆ ಕುಳಿತು ಬಿಟ್ಟಿತೋ ಎಂಬಂತೆ ತಲೆ ಬಾಗಿಸಿ ಕುಳಿತೆ. "ಬಸವಣ್ಣ ಒಳ್ಳೆಯವನು, ಅಲ್ಲವೆ ತಾಯಿ ?" ಎಂದು ಕೇಳಿದರು. "ಜೇನು ತುಪ್ಪ ಸಿಹಿ ಅಲ್ಲವೆ ?" ಎಂದು ಕೇಳಿದಂತಾಗಿ ನಸುನಕ್ಕೆ. ಉತ್ತರವೂ

ಹೇಳಲಿಲ್ಲ, ತಲೆಯನ್ನೂ ಎತ್ತಲಿಲ್ಲ. "ಅವನು ಈಗ ಮಹಾಕರಣಿಕನ ಸ್ಥಾನಕ್ಕೆ ಏರಿದ್ದಾನೆ. ನಾಳೆ ದಂಡಾಧೀಶನೂ ಆದಾನು." ಏನಾದರೇನು, ಏನಾಗದಿದ್ದರೇನು ? ಮುದಿ ಎತ್ತಿನ ಮೇಲೆ ಕುಳಿತ ಶಿವನನ್ನು ತಪಸ್ಸಿನಿಂದ ಒಲಿಸಿಕೊಂಡು ವರಿಸಿದ ಉಮೆಯ ಕಥೆ ಮನಸ್ಸನ್ನು ಕಾಡುತ್ತಿತ್ತು. "ನಾನು ಹೇಳಿದ್ದು ಕೇಳಿತೇ ?" ಎಂದು ಅಪ್ಪಾಜಿ ತಮ್ಮ ದನಿಯನ್ನು ಸುಖೋಷ್ಣವಾದ ಹದಕ್ಕೆ ಏರಿಸಿದಾಗಲೇ ಎಚ್ಚರ. "ಹೂಂ" ಎಂದೆ. ಯಾವ ಪ್ರಶ್ನೆಗೆ ಈಗ "ಹೂಂ" ಗುಟ್ಟಿದೆ ಎಂಬುದೂ ತಿಳಿಯದು. "ಹಾಗಾದರೆ ನಾನು ಏನೆಲ್ಲ ಹೇಳಿದೆ ತಿರುಗಿ ಹೇಳು ಮಗು" ಎಂದುಬಿಟ್ಟರು ಅಪ್ಪಾಜಿ. "ನೀವು ತುಂಬಾ ಕೆಟ್ಟವರು ಅಪ್ಪಾಜಿ" ಎಂದೆ. ನಾನು ಹೀಗೆ ಹೇಳಿದಾಗಲೆಲ್ಲ ಅವರಿಗೆ ಸಂತೋಷವಾಗುತ್ತಿತ್ತು. ಈಗಲೂ ಅವರಿಗೆ ಸಂತೋಷವಾಯಿತು. "ಸರಿ ಮಗು, ಗಂಗೆ ಒಪ್ಪಿದ್ದಾಳೆ ಎಂದು ಬಸವಣ್ಣನಿಗೆ ಹೇಳಿಬಿಡುತ್ತೇನೆ ಬಿಡು" ಎಂದರು. ಹಾಗೆ ಹೇಳಿ ಹೊರಟು ಹೋದರು.

ನನಗೆ ತಡೆಯಲಾರದಷ್ಟು ಕಣ್ಣೀರು ಉಕ್ಕಿ ಬಂತು. ಹೇಗೋ ಅದಕ್ಕೆ ಕಟ್ಟೆ ಕಟ್ಟಿ ಅಮ್ಮನ ಹತ್ತಿರಕ್ಕೆ ಓಡಿದೆ. ಅವಳ ತೊಡೆಯ ಮೇಲೆ ತಲೆಯಿಟ್ಟು ಎದೆಯನ್ನೆಲ್ಲ ಒಂದು ತೊಟ್ಟೂ ನೀರಿಲ್ಲದಂತೆ ಹಿಂಡಿ ಹರಿಸಿ ಬಿಡಬೇಕು ಎಂದು ಓಡಿದೆ. ಅಮ್ಮನ ಹತ್ತಿರ ಹೋಗಿ ನೋಡುತ್ತೇನೆ, ನಾನು ಕಂಡ ದೃಶ್ಯ ನನ್ನನ್ನು ಕಲ್ಲಾಗಿಸಿತು. ಅಮ್ಮನ ತೊಡೆಯ ತುಂಬ ತಂಗಿಯ ಮುಡಿ. ಅಮ್ಮನ ಬೆರಳುಗಳು ತಂಗಿಯ ಮುಡಿಯ ಮೋಡದ ನಡುವೆ ಮಿಂಚಾಗಿ ಹರಿದಾಡುತ್ತಿದ್ದುವು. ನನಗೆ ಎಲ್ಲ ಅರ್ಥವಾಯಿತು. ಹಿಂದಕ್ಕೆ ಬಂದುಬಿಟ್ಟೆ.

ಇಡೀ ದಿವಸ ತಂಗಿ ನನ್ನನ್ನು ತಪ್ಪಿಸಿ ಮರೆಯಾಗುತ್ತಿದ್ದಳು. ಅಂದು ಸಂಜೆ ತಂಗಿಯ ಮುದ್ದು ಮುಖವನ್ನು ಎರಡು ಕೈಯಲ್ಲೂ ಹಿಡಿದು ಅವಳ ಕಣ್ಣಲ್ಲಿ ಕಣ್ಣು ನಟ್ಟು ಹೇಳಿದೆ : "ಮಾಯಿ, ನಾನು ಗಂಗೆ, ನೀನು ಗೌರಿ. ನಿನ್ನ ಮನಸ್ಸು ನನಗೆ ತಿಳಿದದ್ದೇ." ಅವಳ ಮುಖ ಅರಳಿತು. ಅವಳ ಕಣ್ಣೀರು ನನ್ನ ಎದೆಯನ್ನು ತೋಯಿಸಿತು.

ಅಮ್ಮನಿಗೆ ಹೇಳಿದಾಗ "ಉಂಟೆ?" ಎಂದರು. ಅಪ್ಪನಿಗೆ ತಿಳಿದಾಗ "ಎಲ್ಲಾದರೂ ಉಂಟೆ ?" ಎಂದರಂತೆ. ಈ ವಿಷಯಕ್ಕೆ ನಾವು ಹಠಮಾರಿಗಳು, ಉಂಟಾಗಿಸಿದೆವು.

'ಇವರು' ನಮ್ಮನ್ನು ಎರಡು ಕಣ್ಣುಗಳಂತೆ ನೋಡಿಕೊಂಡಿದ್ದಾರೆ. ನಾವೂ ಇವರಿಗೆ ಹಾಲು–ಸಕ್ಕರೆ ಆಗಿದ್ದೇವೆ.

ಇವರ ಗುಣವೇ ? ಚೊಕ್ಕ ಚಿನ್ನ ಅಥವಾ ನಮಗೆ ಹಾಗೆ ಕಾಣುತ್ತದೆ. ಅರಮನೆಯ ಕೆಲಸ, ಶಿವಪೂಜೆ, ಶಿವನ ಭಕ್ತ:ರ ಪೂಜೆ ಅಷ್ಟೇ ಇವರಿಗೆ ಗೊತ್ತಿರುವುದು. ಹೊಲಗೇರಿಗೆ ಹೋಗುತ್ತಾರೆ, ಹೊಲೆಯರನ್ನು ಮನೆಗೆ ಬಿಟ್ಟುಕೊಳ್ಳುತ್ತಾರೆ, ಮಡಿ ಇಲ್ಲ, ಮೈಲಿಗೆ ಇಲ್ಲ ಎಂದು ಜನ ಅನ್ನುತ್ತಾರಂತೆ. ಊರು ಹೊಲಗೇರಿ ಒಂದು ಮಾಡಿಬಿಟ್ಟ ಅನ್ನುತ್ತಾರಂತೆ. ಇವೆಲ್ಲ ಸರಿಯೋ ತಪ್ಪೋ ? ಇವರು ಮಾಡಿರುವುದರಿಂದ ಸರಿಯೇ ಇರಬೇಕು. ತಪ್ಪು ಹೆಜ್ಜೆ ಇಡುವ ಮನುಷ್ಯ ಅಲ್ಲ ಇವರು. ಇಷ್ಟಕ್ಕೂ ಸರಿ ತಪ್ಪು ನಿರ್ಣಯ ಮಾಡೋ ಹಕ್ಕು ಮನುಷ್ಯರಿಗೆಲ್ಲಿದೆ ?

ನನಗೆ ಒಂದು ಕೊರತೆ ಕಾಣುತ್ತೆ. ಬೆಳ್ಳಿ, ಬಂಗಾರ, ನೆಲ, ಮನೆ, ನಾಲ್ಕು ನಾಣ್ಯ– ಏನೇನೂ ಇಲ್ಲ ನಮಗೆ. ಇವರಿಗೆ ನಾಳೆಗೇನು, ನಾಳಿದ್ದಿಗೇನು ಎಂಬ ಚಿಂತೆ ಇಲ್ಲ. ಕೇಳಿದರೆ ನಾಳೆ ನಮ್ಮದಲ್ಲ ಎನ್ನುತ್ತಾರೆ. ಇವತ್ತು ಊಟ ನೀಡಿದ ದೇವರು ನಾಳೆ ನೀಡಲಾರನೇ ಎಂದು ಮರುಪ್ರಶ್ನೆ ಹಾಕುತ್ತಾರೆ. ಇವತ್ತು ದೇವರ ಕೈಕಾಲು ಗಟ್ಟಿಯಾಗಿವೆ, ನಾಳೆ ಅವು ಬಡವಾಗಿ ಅವನು ಮುದುಕನಾಗಿಬಿಡುತ್ತಾನಲ್ಲವೇ ? ಎಂದು ತಮಾಷೆ ಮಾಡುತ್ತಾರೆ. ನಮಗೆ ಮಕ್ಕಳಾಗುವುದು ಶಿವನ ಮನಸ್ಸಿಗೆ ಬರಲಿಲ್ಲ. ನಾಳೆಗೆ ನಮಗೆ ಯಾರಾಗುತ್ತಾರೆ ಎಂದು ಕೇಳಿದರೆ ಇಂದಿನವರೆಗೂ ನಮಗಾದ ಶಿವ ನಾಳೆ ತಪ್ಪಿಸಿಕೊಂಡು ಓಡಿ ಹೋಗುತ್ತಾನೆಯೇ ಎಂದು ಕೇಳಿ ನಗುತ್ತಾರೆ. ಇಷ್ಟಕ್ಕೂ ಇವರು ನಮ್ಮ ಜೊತೆ ಇರುವಾಗ ನಾಳಿನ ಚಿಂತೆ ನಮಗೇಕೆ?

## ೧೨. ಸಂಬೊಳಿ ನಾಗಿದೇವ

ಹೌದು, ನೀವು ಕೇಳಿದ್ದು ನಿಜ. ನಮ್ಮ ಕೇರಿಯಲ್ಲಿ ನಮ್ಮ ಮನೆಗೇ ಅಣ್ಣನವರು ಮೊದಲು ಬಂದದ್ದು. ಅಷ್ಟು ಪುಣ್ಯವಂತ ನಾನು. ನನ್ನ ಉದ್ಯೋಗವೇ ? ಅದನ್ನೂ ಒಂದು ಉದ್ಯೋಗ ಅಂತ ಕರೆಯುತ್ತಾರೆಯೆ ? ದೊಡ್ಡವರು ಬಂದರೆ 'ಸಂಬೊಳಿ' 'ಸಂಬೊಳಿ'– ದೂರ ಹೋಗಿ, ದೂರ ಹೋಗಿ– ಅಂತ ಕೂಗೋದು. ಅದು ಅವ ಮಾನದ ವಿಷಯ ಅಂತ ನನಗೆ ಗೊತ್ತೇ ಇರಲಿಲ್ಲ. ಹಾಗೆ ಅಂತ ಬಿಡಿಸಿ ಹೇಳಿದವರೇ ಅಣ್ಣನವರು. ಉದ್ಯೋಗ ಅವಮಾನದ್ದು ಅಂತ ಹೇಳಲಿಲ್ಲ ಅವರು, ಅವರ ಕಣ್ಣಿನಲ್ಲಿ ಯಾವ ಉದ್ಯೋಗವೂ ಕಡ ಮೆಯೂ ಅಲ್ಲ, ಹೆಚ್ಚೂ ಅಲ್ಲ– 'ದೂರ ಹೋಗಿ' ಎಂದು ಕೂಗುವುದು ಅವಮಾನದ್ದು ಎಂದು ಅಣ್ಣನವರು ತಿಳಿಸಿಕೊಟ್ಟರು. ಅದು ನನಗೂ ಒಪ್ಪಿಗೆಯಾಯಿತು. ನಾನು 'ಸಂಬೊಳಿ' ಅಂತ ಕೂಗೋ ಕೆಲಸ ನಿಲ್ಲಿಸಿ ಬಿಟ್ಟೆ. ಎಷ್ಟೋ ಜನ ದೊಡ್ಡವರು ಕೋಪ ಮಾಡಿಕೊಂಡರು. ದೂರು ದೊರೆಗಳವರೆಗೂ ಹೋಯಿತಂತೆ. ಅಣ್ಣನವರು ನಮ್ಮಂಥ ವರು ಮಾಡೋ ಕೆಲಸ ತಪ್ಪಿಸುತ್ತಿದ್ದಾರೆ, ಮುಂದೆ ಇದನ್ನೆಲ್ಲ ಮಾಡೋರು ಯಾರು ಅಂತಲೂ ಕೂಗಾಡಿದರಂತೆ. ಆದರೆ ದೊರೆ ಗಳು ಯಾವುದನ್ನೂ ಕಿವಿಗೆ ಹಾಕಿಕೊಳ್ಳಲಿಲ್ಲ ಅಂದರು.

ಈಗಲೇ ? ಈಗ ನಾನು ಅಣ್ಣನವರ ಮನೆಯಲ್ಲಿ ಸಣ್ಣ ಪುಟ್ಟ ಕೆಲಸ ಮಾಡುತ್ತೇನೆ. ಅವರ ಮನೆಗೆ ತುಂಬಾ ಜನ ಭಕ್ತರು ಬರು ತ್ತಾರೆ. ಅವರದ್ದೆಲ್ಲ ಅದೂ ಇದೂ ಕೆಲಸ ಇರುತ್ತಲ್ಲ. ನಾನು ಸಂಬಳ ಅಂತ ಕೇಳಲಿಲ್ಲ. ಹೊಟ್ಟೆಗಾಗೋ ಅಷ್ಟು ಬರುತ್ತೆ.

ನಮ್ಮ ಜಾತಿಯೇ? ನಮ್ಮನ್ನು ಮುಂಚೆ ಹೊಲೇರು ಅಂತ ಕರೀತಾ ಇದ್ರು. ಅಣ್ಣನವರು ನಮ್ಮನ್ನ– ನಮಗೆ ಸರಿಯಾಗಿ ಹೇಳೋಕ್ಕೂ ಬರೋದಿಲ್ಲ– 'ಮಹಾ ಮಾಹೇಶ್ವರರು' ಅಂತಾರಂತೆ.

ನನ್ನ ಕಥೆ ಚೆನ್ನಾಗಿದೆ, ಕೇಳಿ. ನಾನು ಅಣ್ಣನವರನ್ನ ಇನ್ನೂ ನೋಡೇ ಇರಲಿಲ್ಲ, ಆವಾಗ ನಡೆದದ್ದು. ಒಂದಿನ ಯಾರೋ ಅಂದ್ರು : "ಅಣ್ಣನವರು ಸಾಕ್ಷಾತ್ ಶಿವ, ಅವರ ದರ್ಶನ ಮಾಡು." ಅವರು ಅರಮನೆಗೆ ಹೋಗೋ ದಾರಿಯಲ್ಲಿ ಮರೆಯಾಗಿ ನಿಂತಿದ್ದೆ. ನಮ್ಮ ಕೇರಿಯ ಇನ್ನೂ ನಾಲ್ಕು ಜನ ನನ್ನ ಜೊತೇಲಿದ್ರು. ಅವರಲ್ಲಿ ಒಬ್ಬರೋ ಇಬ್ಬರೋ ಅಣ್ಣನವರನ್ನ ಮೊದಲೇ ನೋಡಿದ್ರು. ಒಂದು ಗುಂಪು ದೂರದಲ್ಲಿ ಬರೋವಾಗ ನಮ್ಮವರಲ್ಲಿ ಒಬ್ಬ ಅಂದ– ಅದೋ ಗುಂಪಿನ ಮಧ್ಯೆ ವಿಭೂತಿ ಧರಿಸಿ, ಉತ್ತರೀಯ ಹೊದ್ದು ಬರ್ತಾ ಇದಾರಲ್ಲ, ಅವರೇ ಅಣ್ಣನವರು. ಅವನು ಹೇಳಬೇಕಾಗೇ ಇರ ಲಿಲ್ಲ. ಆಕಾಶದಲ್ಲಿ ನಕ್ಷತ್ರಗಳ ಮಧ್ಯೆ ದುಂಡಗೆ ಇದಾನಲ್ಲ, ಅವನೇ ಚಂದ್ರ ಅಂತ ಹೇಳಬೇಕೆ? ಅವರು ಹತ್ತಿರ ಬಂದಾಗ, ನಾನು ಜ್ಞಾನ ಇಲ್ಲದೆ, ರೂಢಿ ಮೇಲೆ, 'ಸಂಬೊಳಿ ಸಂಬೊಳಿ' ಅಂತ ಕೂಗಿ ಬಿಟ್ಟೆ. ತಕ್ಷಣ ಅಣ್ಣನವರು ನಿಂತು ಸುತ್ತ ನೋಡಿದರು. ನಾನು ಬೆವರುತ್ತಿದ್ದೆ. "ಯಾರ್‍ರೋ ಅದು ಸಂಬೊಳಿ ಅಂತ ಕೂಗಿದ್ದು, ಕರೆಯೋ ಅವರನ್ನ" ಅಂದ್ರು. ನಾನು, ಇನ್ನೇನು ಕತ್ತಿನ ಮೇಲೆ ಮುಚ್ಚು ಬೀಳಬೇಕು, ಅಂಥ ಹೊತ್ತಿನ ಕೋಣ ಆಗಿ ಬಿಟ್ಟೆ.

ನಾನು ಗಡ ಗಡ ನಡುಗುತ್ತಾ ಗುಂಪಿಗೆ ಹತ್ತು ಮಾರು ದೂರ ದಲ್ಲಿ ನಿಂತೆ. ಅಣ್ಣನವರು ನನ್ನನ್ನ "ಹತ್ತಿರ ಬನ್ನಿ" ಅಂದರು. ನನಗೆ ಆಗ ಏನಾಯಿತು ಹೇಳಲಾರೆ. ಹೊಟ್ಟೆ ತುಂಬ ಊಟ ಮಾಡಿದ ಹಾಗೆ, ಮತ್ತು ಬರೋ ಅಷ್ಟು ಕಳ್ಳು ಕುಡಿದ ಹಾಗೆ. ಅಣ್ಣನವರು ಹೇಳಿದ ಎರಡು ಮಾತೂ ನನಗೆ ಹೊಸದು. 'ದೂರ ಹೋಗು, ದೂರ ಹೋಗು' ಇಷ್ಟೇ ನಾನು, ನನ್ನ ಕೇರಿಯ ಜನ ಕೇಳುತ್ತಿದ್ದದ್ದು. ಈಗ "ಹತ್ತಿರ ಬನ್ನಿ" ಅನ್ನುತ್ತಿದ್ದಾರೆ. ಯಾರು ಕೊಟ್ಟಿದ್ದರು ಅಷ್ಟು ಗೌರವ? ಸ್ವಲ್ಪ ಹೊತ್ತು ದಂಗು ಬಡಿದು ನಿಂತಿದ್ದೆ. ಅವರ ಗುಂಪಿ ನಲ್ಲಿ ಒಬ್ಬರು : "ಅರಮನೆಗೆ ಹೋಗೋಕ್ಕೆ ಹೊತ್ತಾಗುತ್ತೆ. ಬೇಗ ಹತ್ತಿರಕ್ಕೆ ಬನ್ನಿ. ಅಣ್ಣನವರು ಹೇಳಿದ ಹಾಗೆ ಮಾಡಿ" ಅಂದರು.

ನಾನು ಹೆದರಿ ಹೆದರಿ ಅವರ ಹತ್ತಿರ ಹೋದೆ. ಏನಾಗ್ತಾ ಇದೆ ಅಂತ ಗೊತ್ತಾಗೋಕೆ ಮುಂಚೇನೇ ಅಣ್ಣನವರು ಹತ್ತಿರ ಬಂದರು. ಬರಿದಾಗಿದ್ದ ನನ್ನ ಬೆನ್ನ ಮೇಲೆ ಕೈಯಾಡಿಸಿದರು. ನನ್ನ ಮೈ ಮೇಲೆ ಹಾವು ಹರಿದ ಹಾಗೆ, ಬಿಸಿಲಿನಲ್ಲಿ ಬೆಂದಾಗ ತಣ್ಣನೆಯ ನೀರಿನಲ್ಲಿ ಸ್ನಾನ ಮಾಡಿಸಿದ ಹಾಗೆ ಏನೇನೋ ಆಯಿತು. ಹತ್ತಿರ ಇದ್ದವರು "ಸ್ವಾಮೀ, ಅವನು ಹೊಲೇರೋನು" ಅಂದು ಬಿಟ್ಟರು. ಬಸವಣ್ಣನವರು ಥಟ್ಟನೆ ನನ್ನ ಬೆನ್ನ ಮೇಲಿಂದ ಕೈ ಎತ್ತಿ ಬಿಟ್ಟರು. ನನ್ನನ್ನ ಬೆಟ್ಟದ ಮೇಲಿಂದ ಕೆಳಕ್ಕೆ ನೂಕಿಬಿಟ್ಟ ಹಾಗಾಯಿತು. ಒಂದೇ ಕ್ಷಣ. ಅವರು ಎತ್ತಿದ ಕೈ ನನ್ನನ್ನ 'ಹೊಲೇರೋನು' ಅಂದವನ ಬೆನ್ನಿನ ಮೇಲೆ ಬಿತ್ತು. ನಗಾರಿ ಬಾರಿಸಿದ ಸದ್ದಾಯ್ತು. ಅಣ್ಣನವರು ಹೇಳಿದರು : "ಇದೇ ಕೊನೆ. ಇನ್ನು ಮುಂದೆ, ಯಾರನ್ನೂ ಹೊಲೆಯ ಅನ್ನ ಬಾರದು. ಇವರ ಹೆಸರೇನು ಕೇಳಿ– ನಾಗಯ್ಯನೇ, ನಾಗಿದೇವ ಅನ್ನಿ– ಇವರ ಮುಖ ನೋಡಿ, ವಿಭೂತಿ ಧರಿಸಿದಾರೆ. ಇವರ ಕಣ್ಣು ನೋಡಿ, ಹೊಳೀತಾ ಇವೆ. ಇವರು ಭಕ್ತರು. ಇನ್ನು ಮುಂದೆ ಭೂಮಿ ಮೇಲೆ ಎರಡೇ ಜಾತಿ– ಭಕ್ತರದ್ದು ಒಂದು, ಭಕ್ತರಲ್ಲದವರದ್ದು ಇನ್ನೊಂದು. ಹೋಗಲಿ, ಈ ಮಾತು ಮುಂದೆ. ನೋಡಿ, ನಾಗಿದೇವರೇ ಈ ಸಂಜೆ ನಮ್ಮ ಮನೆಗೆ ಬನ್ನಿ, ಮಾತಾಡೋಣ." ನೆಲ ನನ್ನ ಕಾಲನ್ನು ಹಿಡಿದು ಬಿಟ್ಟಿತ್ತು. ನಾನು ಅಳ್ಳಾಡಲಾರದೇ ಹೋದೆ.

ಸಂಜೆ. ಅವರ ಮನೆಗೆ ಹೊರಟೆ. ನನಗೆ ಹೇಳಲಾರದಷ್ಟು ಭಯ. ಹೋಗಲೂ ಆರೆ, ಹೋಗದೆ ಇರಲೂ ಆರೆ. ಹಿರಿಯ ಭಂಡಾರಿಗಳೇ ಅಪ್ಪಣೆ ಮಾಡಿದಾರೆ, ಅಂದ ಮೇಲೆ ಹೋಗದೇ ಇರೋದು ಹೇಗೆ ? ಹಾಗಂತ ಹೋದರೆ ದಾರಿಯಲ್ಲೇ ಅವರ ಬೀದಿಗೆ ಹೋಗದೆ ಇದ್ದ ಹಾಗೆ ಯಾರಾದರೂ ತಡೆದು ಬಿಟ್ಟರೆ ? ಅಂಜಿ ಅಂಜಿ ಮಹಾ ಮನೆ ಇರುವ ಬೀದಿಗೆ ಹೋದೆ. ಯಾರೂ ತಡೆಯಲಿಲ್ಲ.

ಅಣ್ಣನವರ ಮನೆಯ ಬಾಗಿಲಿಗೂ ಹೋದೆ. ಅಲ್ಲೂ ಯಾರೂ ತಡೆಯ ಲಿಲ್ಲ. ಬಾಗಿಲಲ್ಲಿ ಇದ್ದವರು ನಾನು ಯಾರು ಎತ್ತ ಎಲ್ಲ ವಿಚಾರಿಸಿ ದರು. ಅಣ್ಣನವರು ನಿಮ್ಮನ್ನು ಒಳಕ್ಕೆ ಕರೆತರಲು ಹೇಳಿದ್ದಾರೆ, ಬನ್ನಿ ಎಂದರು. ನನ್ನ ಕಿವಿಗಳನ್ನು ನಂಬೋದು ಹೇಗೆ ? ಅಂಜುತ್ತ ಅಂಜುತ್ತ ಒಳಕ್ಕೆ ನಡೆದೆ. ನನ್ನ ಕಣ್ಣುಗಳನ್ನು ನಂಬೋದು ಹೇಗೆ? ಅಷ್ಟು ದೊಡ್ಡ ಮನೆ. ಅಂಥದನ್ನು ನಾನು ನೋಡೇ ಇರಲಿಲ್ಲ. ಎಲ್ಲ ಥಳ ಥಳ ಹೊಳೀತಿದೆ. ಮೈಯೆಲ್ಲ ಹೂವಾಗಿ ಅರಳಿದ ಹಾಗೆ, ತೇಲಾ ಡಿದ ಹಾಗೆ, ಬರಿದೆ ಸೋಜಿಗ.

ಒಳಗೆ ಅಣ್ಣನವರು ಆಸನದ ಮೇಲೆ ಕೂತಿದ್ದರು. ಇನ್ನೂ ಅನೇಕರು ಅವರ ಸುತ್ತ ಆಸನಗಳ ಮೇಲೆ ಕೂತಿದ್ದರು. ನಾನು ಅಣ್ಣನವರಿಗೆ ಅಡ್ಡ ಬಿದ್ದೆ. ಅವರು "ಚು, ಚು, ಚು, ಚು. ಇಲ್ಲಿ ಯಾರೂ ಯಾರಿಗೂ ಕಾಲುಮುಟ್ಟಿ ನಮಸ್ಕಾರ ಮಾಡಬಾರದು. ಸುಮ್ಮನೆ 'ಶರಣಾರ್ಥಿ' ಎಂದರೆ ಸಾಕು" ಅಂತ ಹೇಳಿದರು. ಅವರ ಮೃದುವಾದ ಮಾತೇ ಅಪ್ಪಣೆಯ ಹಾಗೆ ಇತ್ತು. ಉಳಿದವರು ನಾನು ಹೇಳುವ ಮುಂಚೆಯೇ 'ಶರಣಾರ್ಥಿ' ಅಂದರು. ಅವರೆಲ್ಲ ದೊಡ್ಡ ವರು. ತಿಳಿವಳಿಕೆ ಉಳ್ಳವರಂತೆ. ಆಮೇಲೆ ಗೊತ್ತಾಯಿತು. ಅಣ್ಣ ನವರು ನನ್ನನ್ನು ತೋರಿಸಿ, "ಇವರೇ ನೋಡಿ ನಾನು ನಿನ್ನೆ ಹೇಳಿದೆನಲ್ಲ ನಾಗಿದೇವರು ಅಂತ, ದೊಡ್ಡ ಭಕ್ತರು" ಅಂದರು. ನನಗೆ ಅಲ್ಲೇ ಅವರ ಪೀಠದ ಅಡಿಯಲ್ಲಿ ಹುದುಗಿಕೋ ಬೇಕು ಅಷ್ಟು ನಾಚಿಕೆ ಆಯಿತು. ನಾನೆಂಥ ಭಕ್ತ, ಹುಂಬ ಅಷ್ಟೆ. ಅಣ್ಣನವರು ನಾನು ಬೇಡ ಅಂದರೂ ಕೇಳದೆ ಕೈ ಹಿಡಿದು ಎಳೆದು ತಮ್ಮ ಪಕ್ಕದಲ್ಲೇ ಆಸನದ ಮೇಲೆ ಕೂರಿಸಿಕೊಂಡರು. ಆಸನ ಹೊಲಸಾಯಿತಲ್ಲ ಅಂತ ನಾನು ಬೆವರಿದೆ. ಬಿಟ್ಟರೆ ಮತ್ತೆ ಬದುಕಿದ ಹಾಗೆ ಅಂತ ಒದ್ದಾಡಿದೆ.

ಏನೇನೋ ಮಾತುಕತೆ ನಡೀತು. ನನಗೆ ಅದೆಲ್ಲಾ ತಿಳೀಲಿಲ್ಲ. ಹೊರಡುವಾಗ ಅವರಿಗೆಲ್ಲ ಶರಣಾರ್ಥಿ ಅಂದೆ. ಅವರೂ ಎಲ್ಲ ಶರ

ಣಾರ್ಥಿ ಅಂತ ಹೇಳಿ ನನಗೆ ಕೈಮುಗಿದರು. ನನ್ನ ಜನ್ಮದಲ್ಲೇ ಯಾರೂ ನನಗೆ ಕೈ ಮುಗಿದಿರಲಿಲ್ಲ. ಇದೇನೋ ಕಲಿಕಾಲ ಅಂತ ಸುಮ್ಮನಾದೆ. ಅಣ್ಣನವರು ಬಾಗಿಲವರೆಗೂ ಬಂದು ನನ್ನನ್ನ ಕಳಿಸಿಕೊಟ್ಟರು. ತಲೆ ಬಾಗಿಲ ಹತ್ತಿರ ನಿಂತು ಅಂದರು: "ನಾಗಿದೇವರೇ ನಾನು ನಾಳೆ ಮಧ್ಯಾಹ್ನ ನಿಮ್ಮ ಮನೆಗೆ ಬರುತ್ತೇನೆ." ನನಗೆ ಸಿಡಿಲು ಬಡಿದ ಹಾಗಾಯ್ತು. ಇಂಥ ಶುಚಿವಂತರು ನಮ್ಮ ಮನೇಗೆ ಇರಲಿ, ನಮ್ಮ ಕೇರಿಗೆ ಬರೋಣ ಅಂದ್ರೆ ಏನು? ಆದರೆ ಬರಬೇಡಿ ಅಂತ ಯಾವ ಬಾಯಲ್ಲಿ ಹೇಳಲಿ? ನನ್ನ ಕಷ್ಟ ಅಷ್ಟಕ್ಕೇ ಮುಗೀಲಿಲ್ಲ. ಅಣ್ಣ ನವರು "ನಾಗಿಮಯ್ಯ, ಇಲ್ಲಿ ಕೇಳಿ, ನಾಳೆ ಮಧ್ಯಾಹ್ನ ಪ್ರಸಾದ ನಿಮ್ಮಲ್ಲೇ" ಅಂದರು. "ಪ್ರಸಾದ ಅಂದರೆ?" ನಾನು ಪೇಚಾಡಿದೆ. ಅವರು "ಪ್ರಸಾದ ಅಂದರೆ ಊಟ" ಅಂದರು. ನಾನು ತೊದಲಿದೆ: "ಸ್ವಾಮಿ, ನಮ್ಮದು ಮನೆ ಅಲ್ಲ, ಗುಡಿಸಲು. ತಮ್ಮಂಥವರು ಒಳಕ್ಕೆ ಬರಲಾರದಷ್ಟು ಚಿಕ್ಕದು. ಇನ್ನು ಊಟ, ರೊಟ್ಟಿ ಪಲ್ಲೆ." "ಅಷ್ಟೇ ಆಗಲಿ" ಎಂದು ಹೇಳಿ ಒಳಕ್ಕೆ ನಡೆದು ಬಿಟ್ಟರು. ನಾನು ನಿಂತು ಅವರ ಮನೆಯ ಬಾಗಿಲನ್ನೇ ನೋಡುತ್ತಿದ್ದೆ. ಅವರು ನನ್ನನ್ನು ಎತ್ತಿ ಆಕಾಶಕ್ಕೆ ಎಸೆದಿದ್ದರು. ಮುಂದೆ?

## ೧೩. ದುರ್ಗವ್ವ

ಅವತ್ತು ನಮ್ಮ ಕೇರಿಗೆ ಅಣ್ಣಾವ್ರು ಬಂದಿದ್ರು. ನನ್ನ ಹುಡುಗ ನಾಗ ಅವರನ್ನ ನಮ್ಮ ಮನೀಗೆ ಬರ್ರಿ ಅಂದಿದ್ದನಂತೆ. ಊಹುಂ. ಅವ್ರೇ ನಮ್ಮ ಮನೀಗೆ ಬರ್ತೀನಿ ಅಂದ್ರಂತೆ. ಪ್ರಸಾದ ನಿಮ್ಮನೀಲೆ ಅಂದ್ರಂತೆ. ನಮ್ಮ ಹುಡುಗನಿಗೆ ಪ್ರಸಾದ ಅಂದ್ರೆ ಏನೂಂತ ತಿಳೀಲಿಲ್ಲವಂತೆ.

ಹೊಲಗೇರಿಗೆ ಒಬ್ಬ ಅರಮನೆ ದೊಡ್ಡ ಸಂಬಳದವರು ಊಟಕ್ಕೆ ಬರ್ತೀನೀಂದ್ರೆ ಯಾರ್ಯಾರು ನಂಬಬಹುದೆ? ಕೇರಿಗೆ ಕೇರೀನೆ ಗುಂಪು ಕಟ್ಟೆ ಬಿಡ್ತು. ಅಣ್ಣನವರನ್ನ ನೋಡೋಕೆ ಅಂತ ಒಂದು, ನಮ್ಮ ಹಟ್ಟೇಲಿ ಉಣ್ತಾರ ಅಂತ ನೋಡೋದು ಇನ್ನೊಂದು. ಅಂಬ್ಲಿ, ರೊಟ್ಟಿ, ಪಲ್ಲೆ. ಸ್ವಾಮಿ ನೆತ್ತೀ ಮೇಲೆ ಬರ್ತಾ ಬರ್ತಾ ನಮ್ಮ ಹುಡುಗ ಕೇರೀಗುಂಟ ಓಡಾಡಿದ್ದೂ ಓಡಾಡಿದ್ದೇ. ನಾ ನೆಲ ಸಾರಿಸಿದ್ದೂ ಸಾರಿಸಿದ್ದೇ.

ಸ್ವಾಮಿ ನೆತ್ತಿ ದಾಟಿದ. ಸುಮಾರು ಜನರ ಒಂದು ಗುಂಪೇ ಇಳೀತು. ಅಷ್ಟೊಂದು ಜನಕ್ಕೆ ಈ ಪುಟ್ಟ ಹಟ್ಟೇಲಿ ಜಾಗ ತಾನೆ ಎಲ್ಲಿ? ಎಲ್ಲಾ ಆಚೆ ಕಡೆ ನಿಂತರು. ಅಣ್ಣಾವ್ರು–ಅವ್ರು ದೇವ್ರೇ ಸ್ವಾಮಿ–ಒಬ್ಬರೇ ಒಳಕ್ಕೆ ಬಂದ್ರು. "ಏನಕ್ಕಾ ಚೆನ್ನಾಗಿದೀಯಾ? ಅಂದ್ರು. "ದೇವ್ರೇ ನೀವು ಹಟ್ಟೀ ಒಳಕ್ಕೆ ಬಂದ್ರಿ, ಅದೇ ಚಂದ ನಮಗೆ" ಅಂದೆ. ಅವರು "ನೀನು ತುಂಬಾ ಜಾಣೆ" ಅಂದ್ರು. ಅದನ್ನ ಇದನ್ನ ನಾಕು ಮಾತಾಡಿದ್ರು. "ಉಣ್ಣಕಿಕ್ತೀಯೊ?" ಅಂದ್ರು. ಗಂಗಾಳ ಇಟ್ಟೆ. "ಇದು ಫಳ ಫಳಾ ಹೊಳೀತಿದೆ, ಸೂರ್ಯ ಇದ್ಹಂಗೆ" ಅಂದ್ರು. ಬಲೆ ತಮಾಷೆ ಮಾಡಿದ್ರು: "ನೀನ್ ಏನ್ ಬೇಯಿಸಿಕೊಂಡೇ ಸಾಯೋ ಆಕೆಯೋ, ಇಲ್ಲ ಸೊಸೆ ಗಿಸೆ ತರ್ತೀಯೋ?" ನಾನಂದೆ: "ಅಣಾವ್ರೆ, ನಾವು ಬಡವ್ರು. ನಿಲ್ಲೋಕೆ ನೆರಳೇ ಇಲ್ಲ. ಹೆಣ್ಣು

ಯಾರು ಕೊಡ್ತಾರೆ ?" ಅವರು ನಕ್ಕು ಹೇಳಿದ್ರು: "ಶಿವಾ ಮನೇ ನೋಡಲ್ಲ, ಮನಸ್ಸು ನೋಡ್ತಾನೆ. ನೀವು ದೊಡ್ಡವರು. ಹೆಣ್ಣಿನ ಬಗ್ಗೆ ಚಿಂತೆ ಬಿಡಿ. ನಮ್ಮ ಕೇರಿಯಿಂದಲೇ ಹೆಣ್ಣು ಕೊಡಿಸ್ತೀನಿ. ಬ್ಯಾಡ, ಬ್ರಾಂಬ್ರ ಜಾತಿ ಹೆಣ್ಣು ಬೇಕಾದರೂ ಹೇಳಿ, ಬ್ಯಾರೆ ಜಾತಿ ಹೆಣ್ಣಾದರೂ ಸೈ. ಈಗೆಲ್ಲಾ ಜಾತಿ ಹೋಯಿತು. ಭಕ್ತರದೆಲ್ಲ ಒಂದೇ ಜಾತಿ. ಹೆಣ್ಣು ಕೊಡಿಸ್ತೀನಿ, ನಾನೇ ನಿಂತು ಮದುವೇನೂ ಮಾಡಿಸ್ತೀನಿ." ಅದೀಗ ಎದೆ. ನಾನು "ಆಗ್ಲೀರಿ" ಅಂದೆ.

ಉಂಡರು. ಎಷ್ಟು ಬ್ಯಾಡಾಂದ್ರು ತಾವೇ ಎತ್ತಿಕೊಂಡು ಹೋಗಿ ಗಂಗಾಳ ತೊಳದ್ರು. ನನ್ನ ಹುಡುಗ ನನ್ನ ಒಂದ್ಸಲ, ಅವರ ಮೊಕ ಒಂದ್ಸಲ ನೋಡ್ತಾ ನಿಂತೇ ಇದ್ದ. ಅವನಿಗೆ ಎದೇನೆ ನಿಂತ್ಹೋಗಿತ್ತು. ಮಾತೂ ಇಲ್ಲ, ಕತೇನೂ ಇಲ್ಲ. ಅವರನ್ನ ನೋಡಾಕೆ ಎರಡು ಕಣ್ಣು ಸಾಕಾಗಾಕಿಲ್ಲ. ಫಳಾ ಫಳ ಹೊಳೀತಾರೆ, ಸೂರ್ಯ ನಂಗೇಯ. ಹೋಗುವಾಗ ಅಂದ್ರು: "ದುರ್ಗವ್ವ, ನಮ್ಮನೆ ಕಡಿ ಬರ್ತಿರಿ, ಏನೂ ತಿಳಕೋ ಬ್ಯಾಡ್ರಿ. ಇನ್ಮ್ಯಾಲೆ ಈ ಜಾತಿ ಪಾತಿ ಏನೂ ಉಳ್ಯೋದಿಲ್ಲ. ನಾವು ನೀವು ಎಲ್ಲಾ ಒಂದೇಯ."

ನಾನು ಮುದುಕಿ, ಅವರು ದೇವರು. ಆದ್ರೂ ಅವ್ರ ಮಾತು ನಿಜಾನ ಅಂತ ಸಂಶಯ ಇದ್ದೇ ಅದೆ. ಈ ಜಾತಿ ಪಾತಿ ಹೋಗೋದು ಹೌದಾ? ಇವ್ರೇನೋ ಅಂತಾರೆ, ನಿಜ, ಆದ್ರೆ ಇವ್ರ ಜಾತ್ಯೋರೇ ಒಪ್ಪಬೇಕಲ್ಲ. ಬ್ರಾಂಭ್ರು ಒಪ್ಪಬೇಕಲ್ಲ. ನಾವು ಹೊಲೇರು ಒಪ್ಪ ಬೇಕಲ್ಲ. ಜಾತಿ ಹೋದ್ರೆ ಪ್ರಪಂಚನೇ ನಾಶಾ ಆಗತ್ತಂತೆ ಹೌದಾ?

ಅದೆಲ್ಲ ಹೌದೋ ಅಲ್ಲೋ, ಆದ್ರೆ ನಮ್ಮಪ್ಪ ಬಸವಣ್ಣ ನಮ್ಮ ಕೇರಿಗೆ ಬಂದದ್ದು ಹೋದದ್ದು ತೇರು ಬಂದ್ಹಾಂಗೆ ಹೋದ್ಹಾಂಗೆ ಆಯ್ತು. ಆ ದೇವ್ರಿಗೆ ನಾನು ನೈವೇದ್ಯ ನೀಡಿದೀನಿ. ಆ ನಮ್ಮಪ್ಪನ ಮಾತು ನಿಜ ಆದ್ರೆ—ನಾಯಿ ಬಾಳಿಗಿಂತ ಕೀಳು ಈ ನಮ್ಮ ಬಾಳು, ಅದು ವೈನ ಆಗ್ಬೋದು.

## ೧೪. ನೀಲಲೋಚನೆ

ನಮ್ಮ ಮನೆಯವರೇ, ಲೋಕದ ಬಾಯಿ ತುಂಬ ಅವರೇ, ನಿಜ. ಮೆಚ್ಚುವವರು ಮೆಚ್ಚುತ್ತಾರೆ, ತೆಗಳುವವರಿಗಂತೂ ಲೆಕ್ಕವೇ ಇಲ್ಲ. ಇವರಿಗೆ ಚಾಲೂಕು ಕಡಮೆ. ಹಾಗಂದೆ ಅಂತ ಬೇಸರ ಮಾಡಿಕೋ ಬೇಡಿ. ತಿಳಿವಳಿಕೆ ಸಾಲದು ಅಂದ ಮಾತ್ರಕ್ಕೆ ಇವರು ಒಳ್ಳೆಯವರಲ್ಲ ಅಂತ ಆಗೋಲ್ಲ ಅಲ್ಲವೆ? ಸುಖವಾಗಿ ಬದುಕೋ ರೀತಿ ಇವರಿಗೆ ತಿಳೀದು. ಕೈ ಹಿಡಿದ ಗಂಡನ್ನ ಹೀಗೆಲ್ಲಾ ಇನ್ನೊಬ್ಬರ ಮುಂದೆ ಅಂತಾಳೆ ಅಂತ ದೂರಬೇಡಿ. ನೀವು ಕೇಳಿದಿರಿ, ನಾನೂ ಮನಸ್ಸಿನಲ್ಲಿರೋದನ್ನೆಲ್ಲ ಹೇಳಿ ಬಿಡ್ತೀನೆ. ನಾನೇನು ಹೊಸದಾಗಿ ಹೇಳ್ತಾ ಇಲ್ಲ, ಹೇಳಿ ಹೇಳಿ ಸಾಕಾಗಿದೆ. ಕೇಳೋರು ಯಾರು?

ಬದುಕೋ ಮನುಷ್ಯ ತನ್ನ ಪಾಡು ತಾನು ನೋಡಿಕೋ ಬೇಕು. ಹೌದೋ ಅಲ್ವೋ? ತಪ್ಪಿದ್ದರೆ ಹೇಳಿ. ಬಾಯಲ್ಲಿ ಮಾತ್ರ 'ಲೋಕದ ಚಿಂತೆ ನಮಗೇಕೆ?' ಅಂತಾರೆ. ಆದರೆ ಇವರಿಗಿರೋ ಚಿಂತೆ ಎಲ್ಲಾ ಲೋಕದ್ದೇ. ಜಾತಿ ಪದ್ಧತಿ ಹೋಗಬೇಕು ಅಂತಾರೆ, ಅದೇ ಬಾಯಲ್ಲೇ ಶಿವನ ಭಕ್ತರೆಲ್ಲ ಒಂದು ಜಾತಿ ಅಂತಾರೆ. ಇದೂ ಒಂದು ಜಾತಿ ಆಗ ಲಿಲ್ಲವೆ? ಕೇಳಿದರೆ ಕೋಪ ಮಾಡಿಕೊಳ್ಳೋಲ್ಲ, ಕೊರಗ್ತಾರೆ. ಕೋಪ ಮಾಡಿಕೊಂಡರೇ ಎಷ್ಟೋ ವಾಸಿ.

ಇನ್ನೂ ಕೇಳಿ. ಮನುಷ್ಯರಲ್ಲಿ ಮೇಲು ಕೀಳು ಇಲ್ಲ ಅಂತಾರೆ, ಜೊತೆಲೇ ಶಿವನ ಭಕ್ತರೆಲ್ಲ ಒಳ್ಳೆಯೋರು ಉಳಿದವರೆಲ್ಲ 'ಭವಿ'ಗಳು ಅಂತಾರೆ. ಭವಿಗಳು ಕೀಳಂತೆ. ಇದು ನಾಲ್ಕು ಜನ ಒಪ್ಪೋ ಮಾತೆ?

ಅವರೇ ನಮ್ಮ ಬದುಕು, ನಮ್ಮ ಸರ್ವಸ್ವ. ಆದರೆ ಅವರ ಮಾತು, ನಡೆ ಎಲ್ಲ ನಮ್ಮನ್ನ ಕಷ್ಟದಲ್ಲಿ ಸಿಕ್ಕಿಸಿ ಬಿಟ್ಟಿವೆ. ಅವರ ಕಣ್ಣಿಗೆ ಹೊಳೆಯೋದೆಲ್ಲ ಚಿನ್ನ, ಬೆಳ್ಳಗಿರೋದೆಲ್ಲ ಹಾಲು. ಯಾರೇ

ಆಗಲಿ ಹಣೆಗೆ ವಿಭೂತಿ ಬಳಿದು ಎದೆಯ ಮೇಲೆ ಲಿಂಗಾಂತ ಏನನ್ನೇ ಆದರೂ ಕಟ್ಟಿಕೊಂಡು ಬರಲಿ ಅವರ ಕಾಲಿಗೆ ಬೀಳುತ್ತಾರೆ. ಒಂದಿನ ಏನಾಯ್ತು, ನಾಲ್ಕು ಜನ ಥಾಂಡಿಗರು ಎದೇ ಮೇಲೆ ಲಿಂಗ ಅಂತ ಬದನೇಕಾಯಿ ಕಟ್ಟಿಕೊಂಡು ಬಂದಿದಾರೆ. ಬಟ್ಟೇಲಿ ಕಟ್ಟಿದ್ದರು, ಇವರಿಗೆ ಗೊತ್ತಾಗಲಿಲ್ಲ. ಮೋಸ ಮಾಡೋಕೆ ಅಂತಲೇ ಬಂದದ್ದು ಅಂತೀನಿ. ಇವರಿಗೆ ಅವು ಲಿಂಗ ಅಂತಲೇ ಭ್ರಮೆ. ಬಂದವರು ಭಕ್ತರೂ ಅಂತಲೇ ಭಾವಿಸಿ ಅವರಿಗೆ ನಮಸ್ಕಾರ ಮಾಡಿದ್ದೇನು, ಔತಣ ಮಾಡಿಸಿದ್ದೇನು, ವಸ್ತ್ರ ಹೊದಿಸಿದ್ದೇನು– ಮಿತಿಯೇ ಇಲ್ಲ. ಅಷ್ಟೆಲ್ಲಾ ಮಾಡಿಸಿಕೊಂಡ ಮೇಲೆ ಅವರು ನಗುತ್ತಾ ತಮ್ಮ ಎದೆ ಮೇಲಿರೋದು ಬದನೇಕಾಯಿ ಅಂತ ತೆರೆದು ತೋರಿಸಿದರು. ಉಪಚಾರ ಮಾಡಿದ್ದ ನಾವೆಲ್ಲ ಪೆಚ್ಚಾದೆವು. ಇವರು ಮಾತ್ರ ಪೆಚ್ಚಾಗಲಿಲ್ಲ. "ನೀವು ಅದನ್ನ ಕಟ್ಟಿಕೊಂಡು ಬಂದದ್ದು ಲಿಂಗ ಅಂತ. ಯದ್ಭಾವಂ ತದ್ಭವತಿ– ನಾವು ಏನು ಅಂತ ಭಾವಿಸುತ್ತೇವೆಯೋ ಅದು ಅದೇ. ಬಯಲನ್ನೇ ಲಿಂಗ ಅಂತ ಭಾವಿಸಬಹುದಂತೆ, ಬದನೇಕಾಯನ್ನ ಯಾಕೆ ಭಾವಿಸಬಾರದು ? ನನ್ನ ಕಣ್ಣಿಗೆ ಅದು ಲಿಂಗವೇ" ಅಂತ ಹೇಳಿ ಮತ್ತೆ ಅವರಿಗೆಲ್ಲ ನಮಸ್ಕಾರ ಮಾಡಿದರು. ಇವರ ಶ್ರದ್ಧೆ ನೋಡಿ ಬಂದವರು ಪೆಚ್ಚಾದರು. ಇಂಥ ಮನುಷ್ಯನಿಗೆ ಮೋಸ ಮಾಡಿದೆವಲ್ಲಾ ಅಂತ ಭೂಮಿಗೆ ಇಳಿದು ಹೋದರು. ಇವರೇ ಅವರನ್ನ ಸಮಾಧಾನ ಮಾಡಿದರು. ಬಂದವರು ನಿಜವಾದ ಲಿಂಗವನ್ನೇ ಧರಿಸಿ ಭಕ್ತರಾದರು. ಆ ಮಾತು ಬೇರೆ. ಇವರು ಹಸುಗೂಸಿನಂಥವರು. ಹಾಗಿದ್ದು ಈ ಲೋಕದಲ್ಲಿ ಬದುಕುವುದಕ್ಕುಂಟೇ, ಹೇಳಿ ? ಶುದ್ಧ ಚಿನ್ನದಿಂದ ಒಡವೆ ಮಾಡೋದು ಸಾಧ್ಯವೇ ಇಲ್ಲವಂತೆ, ಅದಕ್ಕೆ ಏನಾದರೂ ಸ್ವಲ್ಪ ಬೆರಸಲೇಬೇಕಂತೆ. ಹಾಗಂತ ಅರಮನೆ ಅಕ್ಕಸಾಲಿಗರೇ ಒಂದು ಸಲ ಹೇಳಿದ್ದು ಕೇಳಿಸಿಕೊಂಡೆ. ಹಾಗಿರೋವಾಗ ಈ ಶುದ್ಧ ಅಪರಂಜಿ ತನಗೆ ಬೇಕಾದ ರೂಪ ತಗೊಳ್ಳೋದು ಹೇಗೆ ಸಾಧ್ಯ? ಹಾಗಂತ ನಮ್ಮ ಅಕ್ಕನಾದರೂ ಸ್ವಲ್ಪ ಎಚ್ಚರಿಕೆಯಿಂದ ಇದ್ದಿದ್ದರೆ ಆಗಿತ್ತು.

ಏನು ಮಾಡೋದು ? ಅವಳೂ ಇವರ ಥರಾನೇ ಆಡ್ತಾಳೆ. ಇವರ ನೆರಳು ಅವಳು. ಇವರು ನಿಂತರೆ ನಿಲ್ಲುತ್ತಾಳೆ, ಇವರು ಸಡಗರದಿಂದ ಓಡಾಡಿದರೆ ತಾನೂ ಓಡಾಡುತ್ತಾಳೆ. ಶಿವಪೂಜೆ, ಜಂಗಮಪೂಜೆ ಅಂತ ಚಡಪಡಿಸುತ್ತಾಳೆ.

ಇಲ್ಲಿಗೆ ಎಂಥೆಂಥ ಜನ ಬರ್‍ತಾರೇಂತ ಹೇಳಿದರೆ ನೀವು ನಂಬೋದೇ ಇಲ್ಲ. ಕಳ್ಳರು, ಸುಳ್ಳರು, ದರೋಡೆ ಮಾಡೋರು ಎಲ್ಲಾ ಬರ್‍ತಾರೆ. ಜಂಗಮರ ವೇಷ ಹಾಕೋದು ಒಂದು ಮಹಾ ಕಷ್ಟಾನೆ ? ಹಾಕ್ಕೊಂಡ್ರು, ಬಂದ್ರು. ಇವರಿಗೆ ಅದೆಲ್ಲಾ ಗೊತ್ತಾದರೆ ತಾನೆ ? ಹೋಗಲಿ, ಹೇಳಿದೆವು ಅಂತ ಇಟ್ಕೊಳ್ಳಿ. ಕಿವೀ ಮೇಲೂ ಹಾಕ್ಕೋಳಲ್ಲ, ನಂಬೋದೂ ಇಲ್ಲ.

ಒಂದಿನ ಇವರು ಪೂಜೆಗೆ ಕೂತಿದಾರೆ. ಪೂಜೆಗೆ ಕೂತರೆ ಸ್ವಯಂಭುವೇ. ಯಾರೂ ಅಳ್ಳಾಡಿಸೋ ಹಾಗಿಲ್ಲ. ನಾನು ಹೂವು ಪತ್ರೆ ಧೂಪ ದೀಪ ಅಂತ ಓಡಾಡ್ತಾ ಇದೇನೆ. ಕಂಬದ ಮರೇಲಿ ಕತ್ತಲೇಲಿ ನಿಂತಿದ್ದ ಒಬ್ಬ ಜಂಗಮ ನನ್ನ ಕಿವೀಗೆ ಕೈ ಹಾಕಿ ಕಿವಿಯೇ ಕಿತ್ತು ಹೋಗೋ ಹಾಗೆ ಎಳೆದು ಬಿಟ್ಟ. ನಾನು ಕಿಟಾರನೆ ಕಿರುಚಿಕೊಂಡೆ. ಅವನು ಒಂದೇ ಉಸಿರಿಗೆ ಓಟ ಕಿತ್ತ. ಇವರು ಪೂಜೆ ಬಿಟ್ಟು ಏಳುತ್ತಾರೆಯೆ ? ಅಕ್ಕ ಓಡಿ ಬಂದು ಏನು ಅಂತ ವಿಚಾರಿಸಿದರು. "ನಿಮ್ಮ ಜಂಗಮರ ಸೇವೆ" ಅಂದೆ. ಅಷ್ಟರಲ್ಲಿ ಇವರೂ ಎದ್ದು ಬಂದರು. ನಮ್ಮ ಮಾತು ಕೇಳಿಸಿರಬೇಕು. ತುಂಬ ನೊಂದುಕೊಂಡರು. ಆಮೇಲೆ ಹೇಳಿದರಂತೆ : "ಪಾಪ, ಜಂಗಮರ ಕೈ ನೋಯುವಂತೆ ಮಾಡಿದಳೆ ? ತಾನೇ ಓಲೆಯನ್ನ ಬಿಚ್ಚಿ ನೀಡಬಾರದಾಗಿತ್ತೆ ?" ಇದನ್ನೇ ಅಲ್ಲವೇ ಅವಿವೇಕದ ಅತಿರೇಕ ಅನ್ನೋದು ? ಅಕ್ಕ ಹೇಳಿದರಂತೆ : "ಪಾಪ ನಿಮ್ಮ ಜಂಗಮರ ಕೈಗೆ ಮಾತ್ರ ನೋವಾಗಿರಲಾರದು. ನಮ್ಮ ಮಾಯಿ ನೋವಿನಿಂದ ಕೊಟ್ಟ ಒದೆ ತಕ್ಕೆ ಅವರ ಕೈಯೋ ಕಾಲೋ ಊನವೂ ಆಗಿರಬೇಕು." ಅದನ್ನ

ಕೇಳಿ ಇವರು ಇಡೀ ರಾತ್ರಿ ನಿದ್ದೆ ಮಾಡಲಿಲ್ಲ. ಮರು ದಿನ ಒಂದು ಹನಿ ನೀರನ್ನೂ ಮುಟ್ಟಲಿಲ್ಲ. ನನ್ನ ಜೊತೆ ಒಂದೇ ಒಂದು ಮಾತಾಡಿದ್ದರೆ ಸರಿ. ನಾನೂ ಸುಮ್ಮನಿದ್ದೆ. ಮನಸ್ಸು ರೋಸಿ ಹೋಗಿತ್ತು. ಹೆಂಡತಿಯಾದವಳ ಕಿವಿಗೆ ಕೈಹಾಕಿದವನನ್ನು ಹಿಡಿಸಿ ಅವನ ಕೈಗೆ ಕೋಳ ಹಾಕಿಸೋದನ್ನ ಕಂಡಿದೀರಿ. ಅದು ಬಿಟ್ಟು ಕಳ್ಳನ ಕೈ ನೋಯಿಸಿದೆ ಅಂತ ಹೆಂಡತಿಯ ಮೇಲೆ ಮುನಿದು ಮುಖ ಊದಿಸಿಕೊಂಡರೆ ಅಳುತ್ತೀರೋ ನಗುತ್ತೀರೋ ?

ಈ ಶಿವಲೀಲೆ ಅಲ್ಲಿಗೇ ಮುಗೀತು ಅಂದ್ಕೋಬೇಡಿ. ಇನ್ನೂ ಕೇಳಿ. ತಿಂಗಳ ಹಿಂದೆ ಒಬ್ಬ ಬಂದ. ತಿಂದು ಉಂಡು ಹೊರವಾಗಿ ಬೆಳೆದಿದ್ದ. ಉಡುಪೋ ಒನಪೋ ದೇವರಿಗೇ ಪ್ರೀತಿ. ರಾತ್ರಿ ಪೂಜೆ ಆಯಿತು, ಊಟ ಆಯಿತು. ಕಾಮಣ್ಣನ ಹಾಗೆ ಇದ್ದವನು ಇವರ ಮುಂದೆ ಪಿಸುಗುಟ್ಟಿದನಂತೆ–"ನಾನು ರಾತ್ರಿ ಒಬ್ಬನೇ ಮಲಗಿ ರೂಢಿಯಿಲ್ಲ" ಅಂತ. ಇವರು ಅವನಿಗೆ ಏನು ಮಾತುಕೊಟ್ಟರೋ ನನಗೆ ಗೊತ್ತಿಲ್ಲ. ನನ್ನ ಮುಂದೆ ಬಂದು, ಕುರಿಯಾಗಿ ನಿಂತು, ಕೈ ಕೈ ಹಿಸುಕಿಕೊಳ್ಳುತ್ತಾ, ಹೀಗಂತೆ ಅಂತ ಅವನು ಹೇಳಿದ್ದನ್ನ ತೊದಲಿದರು. ನನಗೆ ಮೈಮೇಲೆ ಪ್ರಜ್ಞೆಯೇ ಹೋಯಿತು. ಮುಳ್ಳು ಹಂದಿಯಾದೆ. ಹೇಳಿದೆ: "ಒಬ್ಬನೇ ಮಲಗೋದಕ್ಕೆ ಭಯ ಆದರೆ ಈ ನಿಮ್ಮ ಪಶುಪತಿ ನಮ್ಮ ಕೊಟ್ಟಗೇಲಿ ಮಲಗಲಿ. ಅಲ್ಲಿ ಅವನ ಸಂಬಂಧಿಗಳಿದ್ದಾರೆ." ಇವರು ಕಿಡಿಕಿಡಿಯಾದರು. "ಜಂಗಮರನ್ನ ಏಕವಚನದಲ್ಲಿ ಕರೆದದ್ದೂ ಅಲ್ಲದೆ ಅವರಿಗೆ ಅವಮಾನ ಬೇರೆ ಮಾಡುತ್ತೀಯಾ" ಎಂದೆಲ್ಲ ಘರ್ಜಿಸಿದರು. ಅವರು ಹಾಗೆ ರುದ್ರಾವತಾರ ತಾಳಿದ್ದನ್ನು ನಾನು ಎಂದೂ ನೋಡಿರಲಿಲ್ಲ. ನಾನು ಶಾಂತಳಾಗಿಯೇ ಹೇಳಿದೆ: "ಬಹುವಚನ ಇಂಥವರಿಗಾಗಿ ಮಾಡಿದ್ದಲ್ಲ." ಕೋಪದಲ್ಲಿ ನಮ್ಮವರು ಎಚ್ಚರ ಕಳೆದುಕೊಂಡರು. "ಅವರು ಸಾಕ್ಷಾತ್ ಶಿವ" ಎಂದರು. ನಾನು ಹೇಳಿದೆ: "ನನಗೆ ಗೊತ್ತಿರೋ ಶಿವ ಒಬ್ಬನೇ. ಅದು ನೀವು. ಇನ್ನೊಬ್ಬ ಇದ್ದರೆ ಅವನು ಕೈಲಾಸದಲ್ಲಿರಬೇಕು. ಅವನಿಗೆ ಇಲ್ಲೇನು

ಕೆಲಸ? ಅವನಿಗೆ ಒಬ್ಬಳಲ್ಲ ಅಂತ ಇಬ್ಬರು ಹೆಂಡರಿದ್ದಾರೆ. ಇದ್ದೂ ಮೂರನೆಯ ಒಬ್ಬಳ ಮೇಲೆ ಕಣ್ಣೆ? ಈ ನಿಮ್ಮ ನಟರಾಜನನ್ನ ಒದ್ದು ಹೊರಕ್ಕೆ ಹಾಕುತ್ತೀರೋ, ಇಲ್ಲ ನಾನೇ ಆ ಕೆಲಸ ಮಾಡಲೋ?" ಹೇಳಿದೆನಲ್ಲ, ಕೋಪ ಇದ್ದ ಕಡೆ ವಿವೇಕಕ್ಕೆ ಎಲ್ಲಿ ಎಡೆ? ನನ್ನನ್ನು ಎಂದೂ ಸ್ವಲ್ಪವೂ ನೋಯಿಸದಿದ್ದ ಆ ಮೃದು ಹೃದಯಿ ಮೈಮೆಟ್ಟಿದ ಆವೇಶದಲ್ಲಿ ನನ್ನನ್ನು ಹೊಡೆಯಲು ಕೈ ಎತ್ತಿದರು. "ನನ್ನ ಮೈ ಮುಟ್ಟಿದರೆ ಶಿವನಾಣೆ" ಎಂದೆ. ಅವರ ಕೈ ನಿಂತಲ್ಲಿಯೇ ಆಕಾಶಕ್ಕೆ ಅಂಟಿಕೊಂಡಂತೆ ನಿಂತುಬಿಟ್ಟಿತು. ನನಗೇ ಅಯ್ಯೋ ಪಾಪ ಎನ್ನಿಸಿತು. ಆದರೆ ಅವರ ಜಂಗಮ ಸೇವೆಯ ಕಾವನ್ನು ಇಳಿಸದೇ ಹೋದರೆ ಅದ ರಲ್ಲೇ ಸುಟ್ಟು ಹೋದಾರು ಎನ್ನಿಸಿತು. ದುಗುಡ ಕೋಪವಾಯಿತು. ಕಾಳಿಯಾಗಿ ಘರ್ಜಿಸಿದೆ: "ಆ ಚಂಡಾಲನನ್ನು ಹೊರಕ್ಕೆ ಕಳಿಸುತ್ತಿರೊ, ಇಲ್ಲ ನಾನೇ ಬೀದಿಗೆ ಹೋಗಿ ನಿಮ್ಮ ಜಂಗಮನ ಮಹಿಮೆಯನ್ನು ಹಾಡಿ ಹೊಗಳಲೋ?" ಅವರ ಸಂಕಟ ಹೇಳತೀರದು. ಆದರೆ ಅಷ್ಟರಲ್ಲಿ ಈ ಗಲಾಟೆ ಕೇಳಿದ ವಿಭೂತಿ ಪುರುಷ ಕಾಲಿಗೆ ಬುದ್ಧಿ ಹೇಳಿದ್ದ.

ನಮ್ಮ ಸಂಸಾರ ಜೀವನದಲ್ಲಿ ನಾಲ್ಕು ಸಲವೋ ಐದು ಸಲವೋ ಅವರಿಗೆ ಎದುರಾಡಿದ್ದುಂಟು. ಆದರೆ ಅಷ್ಟು ಸಲವೂ ಹಾಗೆ ಆಡಿದ್ದು ಅವರ ಹಿತಕ್ಕಾಗೇ. ಅವರನ್ನು ನೋಡಿದಾಗೆಲ್ಲ ನನ್ನಲ್ಲಿ ತಾಯ್ತನ ಅರಳುತ್ತದೆ.

ಇವರು ಒಳ್ಳೆಯವರು. ಇಂಥ ಮಮತೆಯ ಮೂರ್ತಿಯನ್ನು ಕಾಣುವುದು ಕಷ್ಟ. ಇಂಥವರು ತಮ್ಮನ್ನು ತಾವು ನೋಡಿಕೊಳ್ಳ ಲಾರರು ಎಂಬುದೂ ಸತ್ಯ. ತುಂಬ ದಯಾಳು. ಕೈಯಲ್ಲಿರುವುದೆಲ್ಲ ಕೇಳಿದವರ ಪಾಲು. ಅದಕ್ಕೆ ನಮ್ಮ ಆಕ್ಷೇಪಣೆ ಇಲ್ಲ. ಆದರೆ ಇದು ಸಂಸಾರಸ್ಥರ ಮನೆ. ಇಲ್ಲಿಗೆ ಬಂದು ಹೋಗುವವರು ಯೋಗ್ಯರಾಗಿರ ಬೇಕು ಅಂತ ನಮ್ಮ ಮನಸ್ಸು. ಹಾಗೆ ಆಸೆ ಪಡುವುದರಲ್ಲಿ ತಪ್ಪೇನು ಹೇಳಿ?

## ೧೫. ಬಿಜ್ಜಳ

ಮಂಗಳವೇಡೆಯಲ್ಲಿ ನಾವು ಅರಸರಾಗಿದ್ದಾಗ ಸಿದ್ಧ ದಂಡನಾಥರು ಅವನನ್ನು ನಮ್ಮ ಸನ್ನಿಧಿಗೆ ಕರೆದು ತಂದರು. ಅವನನ್ನು ನೋಡಿದ ಮೊದಲ ಕ್ಷಣದಲ್ಲೇ ಅವನು ಜನ್ಮ ಜನ್ಮಗಳ ಪ್ರಿಯ ಬಂಧುವಿನಂತೆ ಕಂಡ. ನಮ್ಮನ್ನು ಅವನು ಅರಸರು ಎಂದು ಎಂದೂ ಕಾಣಲಿಲ್ಲ. ಅವನ ಕಣ್ಣುಗಳು ವಾತ್ಸಲ್ಯವನ್ನು ಸೂಸುತ್ತಿದ್ದವು. ಅವನು ಚಿಕ್ಕವನು. ಆದರೆ ಚಿಕ್ಕ ಕೆಲಸ ಒಂದನ್ನು ಕೇಳಲು ಬಂದವನಂತೆ ಕಾಣಲಿಲ್ಲ. ನಮ್ಮ ಓರಗೆಯವನೇ. ಅವನನ್ನು ನೋಡಿದ ಕೂಡಲೇ ಎದ್ದು ಹೋಗಿ ಅಪ್ಪಿಕೊಳ್ಳೋಣ ಎಂದು ಧಿಡೀರನೇ ಎದ್ದೆವು. ಅದೇ ಕ್ಷಣ ನಾವು ಅರಸರು ಎಂಬುದು ನೆನಪಾಯಿತು. ನೆನಪು ನಮ್ಮನ್ನು ಸಿಂಹಾಸನಕ್ಕೆ ಅಂಟಿಸಿಬಿಟ್ಟಿತು.

ಹೌದು, ಈಗ ನೆನಪಾಗುತ್ತಿದೆ. ಮೊದಲ ಸಲ ದರ್ಶನಕ್ಕೆ ಬಂದಿದ್ದಾನೆ. ಆದರೂ ನಮಗೆ ಬಾಗಿ ಕೈ ಮುಗಿಯಲಿಲ್ಲ. ಅದನ್ನು ನಮ್ಮ ಆಸ್ಥಾನದ ಜನ ಗಮನಿಸದೇ ಇರಲು ಸಾಧ್ಯವೇ ಇರಲಿಲ್ಲ. ಏಕೆಂದರೆ ಎಲ್ಲರ ಕಣ್ಣೂ ಅವನಲ್ಲಿ ಕೀಲಿಸಿದ್ದುವು. ಕಿನ್ನರ ಲೋಕದಿಂದ ಈ ಲೋಕಕ್ಕೆ, ಇಲ್ಲಿ ಏನು ನಡೆಯುತ್ತಿದೆಯೋ ನೋಡಿ ಹೋಗಲು ಬಂದು ಕುತೂಹಲಿಯಂತಿದ್ದ ಅವನು.

ನಮ್ಮ ಮನಸ್ಸಿಗೆ ಬಂದ ಮೊದಲ ಭಾವನೆ–ನಮ್ಮ ಕಿರೀಟವನ್ನು ತೆಗೆದು ಅವನ ತಲೆಗೆ ತೊಡಿಸಿದರೆ ಹೇಗೆ ಎಂದು ? ಆದರೆ ನಮ್ಮ ಸ್ಥಾನ, ಈ ಆಸ್ಥಾನಗಳು ಎಲ್ಲ ಸಹಜ ಭಾವನೆಗಳ ಕುಡಿಗಳನ್ನೂ ಕೊನರಿದ ಕ್ಷಣವೇ ಚಿವುಟಿ ಹಾಕುವಂಥವು ; ಎಲ್ಲ ಒಲವುಗಳ ನಡುವೆಯೂ ಗೋಡೆ ಕಟ್ಟುವಂಥವು. ಸುಳ್ಳು ಸುಳ್ಳೆ ಭಟ್ಟಂಗಿತನ, ಬೆನ್ನ ಹಿಂದೆ ಚೂರಿ ಇವು ರಾಜರಾದವರಿಗೆ ಕಾಣುವಷ್ಟು ಸ್ಪಷ್ಟವಾಗಿ ಬೇರೆ ಯಾರಿಗೆ ಕಾಣುತ್ತವೆ ?

ಉಳಿದವರನ್ನೆಲ್ಲಾ–ಮಿತ್ರರು, ಹೆಂಡತಿ, ಮಕ್ಕಳು, ಮಂತ್ರಿಗಳು, ಸೇವಕರು, ಎಲ್ಲರನ್ನೂ – ಸದಾ ಶತ್ರುಗಳಂತೆಯೇ ಕಾಣಬೇಕು ಎಂಬುದೇ ನಮಗೆ ಮನದಟ್ಟು ಮಾಡಿಸುವ ಮೊದಲ ಪಾಠ. ಯಾವುದೋ ಕಾಣದ ಊರಿಂದ, ಕೇಳದ ಮನೆತನದಿಂದ ಬಂದ ಅವನನ್ನು ಹಾಗೇ ಕಾಣಲು ಯತ್ನಿಸಿದೆವು. ಆದರೆ ವಾತ್ಸಲ್ಯದ ಹೊಳೆಯಾಗಿ ಹೊರಟ ಅವನ ಕಣ್ಣಿನ ಕಾಂತಿ ನಾವು ನೋಡುನೋಡುತ್ತಿರುವಂತೆಯೇ ಕಡಲಾಗಿ ಮೊರೆಯಿತು. ಆ ಪುಣ್ಯದ ಗಳಿಗೆ ಏಕೋ ಏನೋ ಜಾರುವಂತೆಯೇ ತೋರಲಿಲ್ಲ. ಕಡಲಾಗಿ ಮೊರೆದ ಆ ವಾತ್ಸಲ್ಯ ನಮ್ಮ ಮನಸ್ಸಿನ ಸಂಶಯವನ್ನು ಮಾತ್ರ ಅಲ್ಲ, ನಮ್ಮನ್ನೂ ಕೊಚ್ಚಿ ಹಾಕಿಬಿಟ್ಟಿತು. ಒಂದೇ ಗಳಿಗೆಯಲ್ಲಿ ಅವನು ಚಕ್ರವರ್ತಿಯಾಗಿಬಿಟ್ಟ, ನಾವು ಅವನ ಸಾಮಂತರಾಗಿ ಕಂಡೆವು. ಆ ಬಾಂಧವ್ಯ ಕೊನೆಯವರೆಗೂ ಉಳಿದದ್ದು ನಮಗೆ ಅವನಿಗೆ ಇಬ್ಬರಿಗೆ ಮಾತ್ರ ತಿಳಿದಿತ್ತು. ಆ ಮೊದಲ ನೋಟದಲ್ಲೇ ಅವನು ನನ್ನ ಜೀವವನ್ನು–ಚೇತನವನ್ನು, ಮಾನ ಮರ್ಯಾದೆಗಳನ್ನು, ನಮ್ಮ ರಾಜ್ಯವನ್ನು ರಕ್ಷಿಸಲು ಬಂದವನಾಗಿ ಕಂಡ.

ಒಂದು ಅರ್ಥಕ್ಕೆ ಅವನು ನಮ್ಮನ್ನು, ಅಲ್ಲ ಅಲ್ಲ ನಮ್ಮ ರಾಜತ್ವವನ್ನು ಕೊಂದು ಬಿಟ್ಟ. ನಮ್ಮನ್ನು ಅವನ ದಾಸಾನು ದಾಸನಾಗಿ ಮಾಡಿಕೊಂಡು ಬಿಟ್ಟ. ಮಂಗಳವೇಡೆ ಬಿಡುವಾಗ ಎಷ್ಟು ಜನ ಎಷ್ಟು ಥರ ಹೇಳಿದರು– "ಅಬ್ಬ ಅವನ ಸೊಕ್ಕೆ ? ತಮಗೆ ನಮಸ್ಕಾರ ಮಾಡುವುದಿಲ್ಲ, ಅಷ್ಟೇ ಅಲ್ಲ. ತಮ್ಮನ್ನು ಲೆಕ್ಕದಲ್ಲೇ ಇಟ್ಟಿಲ್ಲ. ಅವನನ್ನ ಉಪಾಯವಾಗಿ ಕಳಚಿಕೊಳ್ಳಲು ಇದಕ್ಕಿಂತ ಉತ್ತಮವಾದ ಅವಕಾಶ ನಿಮಗೆ ಸಿಕ್ಕುವುದಿಲ್ಲ.. ಹೇಗೂ ಕಲ್ಯಾಣಕ್ಕೆ ಹೊರಟಿದ್ದೀರಿ. ನೀವು ಕರೆಯದೆ ಅವನು ಖಂಡಿತ ಬರುವುದಿಲ್ಲ. ಅಂಥ ಅಭಿಮಾನಿ ಅವನು. ಅವನ ಸಂಬಂಧ ಕಡಿದುಕೊಳ್ಳಲು ನಿಮಗೆ ಮನಸ್ಸಿಲ್ಲದೇ ಹೋದರೆ ಹೀಗೆ ಮಾಡಿ– ಮಂಗಳವೇಡೆಗೆ ಅವನನ್ನೇ ಮಾಂಡಲಿಕನನ್ನಾಗಿ ಮಾಡಿಬಿಡಿ."

ಎಲ್ಲ ವಾದಗಳಿಗೂ, ಎಲ್ಲ ಉಪದೇಶಗಳಿಗೂ ನಮ್ಮ ಉತ್ತರ ಮುಗುಳ್ನಗೆ ಅಷ್ಟೇ. ನಾವು ಎಂದೋ ನಿರ್ಧಾರ ಮಾಡಿದ್ದೆವು–ಅವನು ಬಂದರೆ ನಾವು ಕಲ್ಯಾಣಕ್ಕೆ ಹೋಗುತ್ತೇವೆ, ಇಲ್ಲದಿದ್ದರೆ ನಮಗೆ ಚಕ್ರವರ್ತಿ ಪದವಿಯೂ ಬೇಡ. ಅವನನ್ನು ನಾವು ಕರೆಯಲೂ ಇಲ್ಲ, ಬರಬೇಡ ಎಂದೂ ಹೇಳಲಿಲ್ಲ. ಅವನ ಮನಸ್ಸಿನಲ್ಲಿ ಏನಿದೆಯೋ ನೋಡೋಣ ಎಂದು ಸುಮ್ಮನಾಗಿಬಿಟ್ಟೆವು. ಅರಸರು ಕಲ್ಯಾಣವನ್ನು ರಾಜಧಾನಿಯಾಗಿ ಮಾಡಿಕೊಳ್ಳುತ್ತಾರೆ ಅಂತ ಯಾರೋ ತಿಳಿಸಿದರಂತೆ. ಕೂಡಲೇ ಅವನು ಪಾತ್ರೆ ಪಡಗ ಕಟ್ಟುವಂತೆ ಮನೆಯುವರಿಗೆ ಹೇಳಿದ ನಂತೆ. ಹೆಸರಿಗೆ ಅರಮನೆಯ ಭಂಡಾರಿ–ಮಹಾ ಭಂಡಾರಿ. ಅವನ ಮನೆಯುವರು ಕಟ್ಟಬೇಕಾಗಿದ್ದದ್ದೂ ಅಷ್ಟರಲ್ಲೇ ಇತ್ತು. ಅದು ನಮಗೆ ಗೊತ್ತಿತ್ತು. ಆದರೂ ಜನರ ಗುಸು ಗುಸು ಬೊಕ್ಕಸದ ಹಣ ವನ್ನ ತಾನೂ ತಿಂದು ಇತರರಿಗೂ ತಿನ್ನಿಸುತ್ತಾನೆ ಅಂತ. ಅವನ ಸರ್ವಸ್ವವನ್ನೂ ನೋಡಿ–ನಾವು ಮರೆಯಲ್ಲಿ ನಿಂತು ನೋಡಬಾರ ದಾಗಿತ್ತು–ನಮ್ಮ ಕಣ್ಣು ಹನಿಯಿತು. ಅವನ ಮನೆಯ ಆಸ್ತಿ ಪಾಸ್ತಿ ಯೆಲ್ಲ ಎರಡು ಹೇರಿನ ಹೊರೆ ಅಷ್ಟೆ. ಅವನ ಮೇಲೆ ದೂರು ಹೇಳು ತ್ತಿದ್ದವರ ಆಸ್ತಿ ಪಾಸ್ತಿ ಸಾಗಿಸಲು ಹತ್ತಾರು ಗಾಡಿಗಳೇ ಬೇಕಾದವು ! ಅವನ ಇಬ್ಬರು ಹೆಂಡಂದಿರೂ ಬರಿಗಾಲಿನಲ್ಲಿ ಹೊರಟರು. ಈ ದೃಶ್ಯ ನೋಡಿ ಹತ್ತಾರು ಜನ–ಅವರಲ್ಲಿ ಒಬ್ಬಿಬ್ಬರು ಅವನ ನಿಂದಕರೂ ಇದ್ದರು–ಕಣ್ಣಲ್ಲಿ ನೀರು ಹಾಕಿಕೊಂಡರು. ನಮ್ಮ ಕರುಳು ಚುರ್ ಅಂತು. ನಾವು ಒಂದು ಮಾತೂ ಆಡಲಿಲ್ಲ. ಆದರೆ ನಮ್ಮ ಮಹಾ ರಾಣಿಯವರು ಅಂದರು : "ಅಣ್ಣನವರು ಅವರ ಹೆಂಡಂದಿರು ಹೇಗೆ ಬರುತಾರೋ ನಾವೂ ಹಾಗೇ ಬರುತ್ತೇವೆ." ಆಗ ನಮಗೆ ಎಚ್ಚರ ಬಂತು. ಅವನ ಮನೆಗೆ ಮೇನೆ ಕಳಿಸಿದೆವು. ಅವನು "ನಮ್ಮ ಜನ ಹೇಗೆ ಬರುತ್ತಾರೊ ನಾನೂ ಹಾಗೆ ಬರುತ್ತೇನೆ" ಎಂದು ಬಿಟ್ಟನಂತೆ. ಕೊನೆಗೆ ನಾವೇ ಹೋಗಿ, ಸಂದರ್ಭದ ಸೂಕ್ಷ್ಮವನ್ನು ವಿವರಿಸ ಬೇಕಾಯಿತು. ಅವನು "ಮಹಾರಾಣಿಯುವರು ಹಾಗೆ ಹಟ

ಮಾಡಿದ್ದಕ್ಕೆ ನಮ್ಮ ಮನೆಯವರು ಮೇನೆಯಲ್ಲಿ ಬರುತ್ತಾರೆ. ನಾನು ನನ್ನ ಜನದ ಜೊತೆ ನಡೆದೇ ಬರುತ್ತೇನೆ" ಅಂದ. ನಾವು ಕೊನೆಗೆ ಬಿಗಿಯಾಗಿ ಹೇಳಬೇಕಾಯಿತು: "ನೀವು ರಾಜ ಭಂಡಾರಿಗಳು, ನಡೆದು ಬರುವುದು ಸಿಂಹಾಸನಕ್ಕೆ ಅಗೌರವ ತೋರಿಸಿದಂತೆ. ಮೇನೆ ಹತ್ತಿ. ಇದು ರಾಜಾಜ್ಞೆ." ನಮ್ಮ ಪುಣ್ಯ. ಅಂದು ರಾಜಾಜ್ಞೆಗೆ ಗೌರವ ಸಂದಿತು. ಉಳಿದಂತೆ ನಡೆದು ಬರಬೇಕಾಗಿ ಬಂದವರ ಅಸೂಯೆ ದ್ವೇಷಕ್ಕೆ ತಿರುಗಿತು.

ನಾವು ಅವನನ್ನು ಪ್ರೀತಿಸದೆ ಇರುವುದು ಹೇಗೆ ಸಾಧ್ಯ, ನೀವೇ ಹೇಳಿ? ಯಾರೋ ಕುಹಕಿಗಳು ಅವನ ಹತ್ತಿರ ಹೋಗಿ ಹೇಳಿದರಂತೆ: "ಸ್ವಾಮಿ, ಈಗ ಬಿಜ್ಜಳ ಮಹಾರಾಜರು ಚಕ್ರವರ್ತಿಗಳಾಗಿದ್ದಾರೆ. ಅವರು ನಿಮ್ಮನ್ನು ಮಂಗಳವೇಡೆಯ ಮಾಂಡಲೀಕರನ್ನಾಗಿ ನೇಮಿಸಿದ್ದಾರೆ. ನಿಮಗೆ ಸಂತೋಷ ತಾನೆ?" ಆಗ ನಾವು ಅಲ್ಲಿರಲಿಲ್ಲ. ಅಲ್ಲಿದ್ದವರು ಹೇಳಿದರು–ಯಾರೂ ನೋಡಬೇಕಾದ ದೃಶ್ಯ, ಯಾರೂ ಕೇಳಬೇಕಾದ ಮಾತು–ಆದರೆ ಯಾರಿಗೂ ಸುಲಭವಾಗಿ ಲಭ್ಯವಾಗದ್ದು ನಡೆದು ಹೋಯಿತಂತೆ. ಈ ಮಾತು ಕೇಳಿ ಅವನು ಮುಹೂರ್ತ ಮಾತ್ರ ಕಣ್ಣು ಮುಚ್ಚಿ ನಿಂತನಂತೆ. ಆಮೇಲೆ ಕಣ್ಣು ತೆರೆದು ಹೇಳಿದನಂತೆ: "ಶಿವ ನನಗೆ ಹೇಳಿದ್ದು ಬಿಜ್ಜಳ ಅರಸರ ಬೊಕ್ಕಸ ನೋಡಿಕೋ ಅಂತ. ನಾನು ಶಿವನ ಅಪ್ಪಣೆಯಂತೆ ಅರಸರ ಬೊಕ್ಕಸವನ್ನು ಘಟ ಸರ್ಪದಂತೆ ಕಾಯುತ್ತಿದ್ದೇನೆ. ಮುಂದೆಯೂ ನಾನು ಶಿವನ ಅಪ್ಪಣೆಯನ್ನು ಪಾಲಿಸುವವನೇ. ಶಿವ ನನಗೆ ಮಾಂಡಲಿಕನಾಗು ಅಂತ ಹೇಳಲಿಲ್ಲ, ಆದ್ದರಿಂದ ಆ ಪದವಿ ನನಗೆ ಬೇಡ. ಶಿವನ ಅಪ್ಪಣೆ ಬೇರೆ ರೀತಿ ಆಗುವವರೆಗೆ ನಾನು ಇದೇ ಕೆಲಸ ಮಾಡುವವನೇ. ಅರಸರು ಇಲ್ಲಿದ್ದರೆ ಇಲ್ಲಿ, ಕಲ್ಯಾಣಕ್ಕೆ ಹೋದರೆ ಅಲ್ಲಿ."

ಅವನು ನಮ್ಮ ಬೊಕ್ಕಸವನ್ನು ಘಟ ಸರ್ಪದಂತೆಯೇ ಕಾದ. ಫಲ? ಬೊಕ್ಕಸದ ಮೇಲೆ ಕಣ್ಣಿದ್ದ ಅನೇಕ ಹದ್ದುಗಳಿಗೆ ಉಪವಾಸ

ವಾಯಿತು. ಬೆಳಗೆದ್ದರೆ ಒಂದೇ ದೂರು: "ನಿಮ್ಮ ಬೊಕ್ಕಸ ಲೂಟಿ ಮಾಡುತ್ತಿದ್ದಾರೆ ನೋಡಿ. ಎಷ್ಟು ಜನಕ್ಕೆ ಊಟ ಹಾಕುತ್ತಾರೆ, ನೀವೇ ನೋಡಿ. ಇಷ್ಟು ಹಣ ಎಲ್ಲಿಂದ ಬಂತು ಅವರಿಗೆ ?" ದ್ವೇಷಕ್ಕೆ ಕಣ್ಣುಂಟೆ, ತರ್ಕ ಉಂಟೆ ? ಹೃದಯ ಉಂಟೆ ? ಅದಕ್ಕಿರುವುದು ವಿಷದ ಹಲ್ಲು, ಹೊರಳು ನಾಲಗೆ. ಸಾಕ್ಷಾತ್ ಶಿವನೇ ಪ್ರತ್ಯಕ್ಷನಾಗಿ "ಬಸವ ಕದಿಯುತ್ತಾನೆ" ಎಂದರೂ ನಾವು ನಂಬುವುದಿಲ್ಲ. ಏಕೆ ಗೊತ್ತೆ ? ಬಸವಣ್ಣನದು ಕದಿಯುವ ಕೈ ಅಲ್ಲ, ಬೇಡುವ ಕೈಯೂ ಅಲ್ಲ, ಸದಾ ನೀಡುವ ಕೈ.

ಅವನ ವೆಚ್ಚದ ಮೂಲ ನಮಗೆ ತಿಳಿದಿದೆ. ಅವನೂ ಬಲ್ಲ, ಅವನ ಸತಿಯರೂ ಬಲ್ಲರು. ಅವನ ಸತಿಯರೂ ಬಲ್ಲರು ಎಂದು ಒತ್ತಿ ಹೇಳುತ್ತಿದ್ದೇನೆ. ಏಕೆ ಗೊತ್ತೆ ? ಅವರಿಗೆ ನಿಜವಾದ ಸಂಗತಿ ಗೊತ್ತಿಲ್ಲದೇ ಇದ್ದರೆ, ಅವನು ರಾಜ ಭಂಡಾರದ ಹಣವನ್ನು ಕದ್ದು ತೆಗೆದುಕೊಂಡು ಹೋಗುತ್ತಿದ್ದರೆ ಅವನು ಮನೆಯ ಮೆಟ್ಟಲನ್ನು ಹತ್ತುತ್ತಿದ್ದಂತೆಯೇ, ಮನೆಯ ಹೆಬ್ಬಾಗಿಲನ್ನು ಧಡಾರನೆ ಅವನ ಮುಖದ ಮುಂದೆ ಮುಚ್ಚಿ ಅವರಿಬ್ಬರೂ ಒಳಗೆ ನೇಣು ಹಾಕಿಕೊಳ್ಳುತ್ತಿದ್ದರು. ನಾವು ಮೊದಲೇ ಮಾತುಕೊಟ್ಟದ್ದಂತೆ ಅವನಿಗೆ ನಿತ್ಯ ವೆಚ್ಚಕ್ಕೆ ಎಂದು ಹತ್ತು ಹೊನ್ನು ಕೊಡುತ್ತಿದ್ದೆವು. ಅವನು ಅದನ್ನು ಎಂದೂ ಮನೆಯವರೆಗೆ ತೆಗೆದುಕೊಂಡು ಹೋದವನಲ್ಲ. ಪೂಜೆಯ ಸಾಮಗ್ರಿ, ಅಡುಗೆಗೆ ಸಾಮಾನು ಇದಕ್ಕೇ ವೆಚ್ಚಮಾಡುತ್ತಿದ್ದ. ಭಕ್ತರು ಪೂಜೆ ಮಾಡಬೇಕು, ಭಕ್ತರು ಊಟಮಾಡಬೇಕು. ನಮಗೆ ಯಾವುದಾದರೂ ಕಾರಣಕ್ಕೆ ಹೆಚ್ಚು ಸಂತೋಷವಾಗಿ ಹೆಚ್ಚು ಹೊನ್ನು ಕೊಟ್ಟರೆ ಅಂದು ಹೆಚ್ಚು ಭಕ್ತರಿಗೆ ಊಟ. ನಮಗೆ ನಿಜವಾಗಿ ಆ ಕಾರಣಕ್ಕೆ ಬೇಸರ ಇಲ್ಲ. ನಾವು ಪೂಜಿಸುವ ಶಿವನೇ ತಾನೇ ಅವನಿಗೂ ದೇವರು ? ಅಂಥ ಶಿವನ ಭಕ್ತರಿಗೆ ತಾನೆ ಊಟ ?

ಅವನು ಕಳ್ಳ ಎಂದು ಯಾರಾದರೂ ದೂರಿದಾಗಲೆಲ್ಲ ನಮ್ಮ ಮನಸ್ಸಿಗೆ ಆಗುತ್ತಿದ್ದ ಯಾತನೆ ಎಷ್ಟು ! ಪತಂಜಲಿ ಶಾಸ್ತ್ರಿಗಳು,

ಯೋಗಾನಂದ ಭಟ್ಟರು ಒಂದು ಮಧ್ಯಾಹ್ನ ಏದುಸಿರು ಬಿಡುತ್ತಾ ಓಡಿ ಬಂದರು. "ಪ್ರಭು, ಈ ಗಳಿಗೆಯೇ ತಾವು ಭಂಡಾರಕ್ಕೆ ಬಿಜಯ ಮಾಡಿಸಬೇಕು. ಇವತ್ತು ಬಸವಣ್ಣನವರು ಖಂಡಿತ ಸಿಕ್ಕಿಬೀಳುತ್ತಾರೆ. ಸಾವಿರ ಜನ ಜಂಗಮರಿಗೆ ಊಟ ಹಾಕಿ ಸಾವಿರ ಜನದ ಕೈಲೂ ಒಂದೊಂದು ಚಿನ್ನದ ನಾಣ್ಯ ಕೊಟ್ಟಿದ್ದಾರೆ." ನಮಗೆ ಒಳಗೇ ನಗು. ನೂರು ಜನ ಅಧಿಕಾರಿಗಳು ಭಂಡಾರಕ್ಕೆ ಬರಲಿ ಎಂದು ಅಪ್ಪಣೆ ಮಾಡಿದೆವು. ಎಲ್ಲರೂ ಸೇರಿ ಒಂದು ರಾತ್ರಿ ಒಂದು ಹಗಲು ಇದ್ದ ನಾಣ್ಯಗಳನ್ನೆಲ್ಲ ಲೆಕ್ಕ ಮಾಡಿದರು. "ಇರಬೇಕಾದಷ್ಟು ಹಣ ಇದೆ. ಒಂದು ನಾಣ್ಯವೂ ಕಡಿಮೆಯಾಗಿಲ್ಲ, ಲೆಕ್ಕ ಸರಿಯಾಗಿದೆ" ಎಂದು ವರದಿ ಮಾಡಿದರು. ಶಾಸ್ತ್ರಿಗಳು "ಸ್ವಾಮಿ, ಬಸವಣ್ಣನವರು ಇಂದ್ರ ಜಾಲ ಕಲಿತಿದ್ದಾರೆ. ಇಲ್ಲದಿದ್ದರೆ ಲೆಕ್ಕ ಹೇಗೆ ಸರಿಯಾಗಿರುತ್ತಿತ್ತು ?" ಎಂದು ಕೇಳಿದರು. ನಾವು ಸ್ವಲ್ಪ ದನಿಯೇರಿಸಿ ಹೇಳಿದೆವು. "ಶಾಸ್ತ್ರಿಗಳೇ ಅಣ್ಣನವರ ವಿಷಯದಲ್ಲಿ ಆರೋಪ ಮಾಡುವಾಗ ನಾಲಗೆ ಬಿಗಿಯಾಗಿರಲಿ. ಅಣ್ಣನವರು ಹೇಳುವ ಒಂದು ಮಾತಿದೆ: 'ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ ನೆರೆಮನೆಯ ಸುಡದು.' ಇತರರನ್ನು ದೂಷಿಸಿದರೆ, ಇತರರಿಗಾಗಿ ಕರುಬಿದರೆ ಹಾನಿ ನಿಮಗೇ ಹೊರತು ಅವರಿಗಲ್ಲ. ಈ ಸಲಕ್ಕೆ ನಿಮ್ಮಿಬ್ಬರನ್ನೂ ಕ್ಷಮಿಸಿದ್ದೇನೆ. ಮುಂದೆ ಇಂಥದೇ ಮಿಥ್ಯಾರೋಪ ತಂದರೆ ನಿಮಗೆ ಶಿಕ್ಷೆ ತಪ್ಪಿದ್ದಲ್ಲ, ಎಚ್ಚರ ಇರಲಿ." ಅವರು ತಲೆ ಕೆಳಗೆ ಹಾಕಿ ಹೊರಟು ಹೋದರು. ಏನಾದರೇನು, ಅದು ಸರ್ಪ ಆ ಸಲಕ್ಕೆ ಹೆಡೆ ಮುಚ್ಚಿದಂತೆ ಅಷ್ಟೆ.

ನಮಗೆ ಅವನ ಮೇಲೂ ಆ ಸಲ ತುಂಬ ಕೋಪ ಬಂತು. ಮೂರೇ ದಿನಗಳ ಹಿಂದೆ ಬಸವಣ್ಣನ ಕೈಲಿ ನಾನು ಎರಡು ಸಾವಿರ ಹೊನ್ನು ಕೊಟ್ಟಿದ್ದೆ. "ಒಂದು ನೆಲೆ ಮಾಡಿಕೋ, ತಲೆಯ ಮೇಲೆ ಒಂದು ಸೂರು ಬೇಡವೆ? ಮನೆಯಲ್ಲಿ ಒಬ್ಬರಲ್ಲ ಅಂತ ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ಅವರಿಗೆ ನಗ ನಾಣ್ಯ ಏನೂ ಬೇಡವೆ?

ನೀನೇನೋ ಬೋಳು ಬಸವ. ನಿನ್ನನ್ನು ಕಟ್ಟಿಕೊಂಡದಕ್ಕೆ ಅವರಿಗೂ ಈ ವಿರಾಗಿಣಿಯರ ಬಾಳೆ?" ಅವನು ಮಧ್ಯೆ ಬಾಯಿ ಹಾಕಿ "ಇವತ್ತಿಗೆ ಹೇಗೆ, ನಾಳಿಗೆ ಹೇಗೆ ? ಎಂದು ಚಿಂತೆ ಮಾಡಿದರೆ, ನಾಳೆಗೆ ಎಂದು ಕೂಡಿಟ್ಟರೆ ಶಿವನು ರಕ್ಷಿಸುತ್ತಾನೆ ಎಂಬ ಶಕ್ತಿಯಲ್ಲೇ ನಂಬಿಕೆ ಕಳೆದುಕೊಂಡ ಹಾಗಲ್ಲವೆ ?" ಎಂದ. ನಾವು ಏನೇನೋ ಸಮಾಧಾನ ಹೇಳಿ ಬಲವಂತವಾಗಿ ಅವನ ಕೈಯಲ್ಲಿ ಎರಡು ಸಾವಿರ ಹೊನ್ನು ಇಟ್ಟೆವು. ಅವನು ಅದನ್ನು ಹಾಗೆ ವೆಚ್ಚಮಾಡಿಬಿಟ್ಟಿದ್ದಾನೆ !

ಅವನಿಗಾದರೂ ಸ್ವಲ್ಪವೂ ವಿವೇಕವಿಲ್ಲ. ಒಳ್ಳೆಯವನು, ಒಪ್ಪುತ್ತೇನೆ. ಅವನ ಭಕ್ತಿಗೆ ಇತಿಯಿಲ್ಲ, ಮಿತಿಯಿಲ್ಲ, ವಿವೇಕದ ಕಡಿವಾಣವಿಲ್ಲ, ಅದು ಅವನ ಪಾಡು. ಆದರೆ ಇಷ್ಟೊಂದು ಜನಕ್ಕೆ ಏಕೆ ಊಟ ಹಾಕುತ್ತಾನೆ ? ಅವರಲ್ಲಿ ಒಳ್ಳೆಯವರು ಯಾರೋ ದುಷ್ಟರು ಯಾರೋ ? ಭಕ್ತರು ಯಾರೋ ಬರಿ ವೇಷಧಾರಿಗಳು ಯಾರೋ ? ಹೀಗೆ ತಿಂದು ಮೈಕೊಬ್ಬಿ ಕಂಡ ಕಂಡ ಕಡೆ ಹಾಯುವವರೂ ಇದ್ದಾರೆ ಎಂದು ನಮ್ಮ ಕಿವಿಗೆ ಬಿದ್ದಿದೆ. ಇವನೇನೋ ಎಲ್ಲರೂ ಕೆಲಸ ಮಾಡಿಯೇ ತಿನ್ನಬೇಕು ಎನ್ನುತ್ತಾನೆ. ಬಿಟ್ಟಿ ಊಟ, ಮೇಲೆ ದಕ್ಷಿಣೆ ಇವೆಲ್ಲ ಇರುವಾಗ ಇವನ ಮಾತು ಯಾರು ಕೇಳುತ್ತಾರೆ ?

ಈಗ ನಮಗೆ ಗೊತ್ತಾಗುತ್ತಿದೆ, ಇವನ ಶತ್ರುಗಳು ಶಾಸ್ತ್ರಿಗಳೂ ಅಲ್ಲ, ಭಟ್ಟರೂ ಅಲ್ಲ, ಇವನ ಶತ್ರುಗಳು ಈ ವೇಷಧಾರಿ ಜಂಗಮರೇ. ಈ ಮಿಂಡರು, ಕಳ್ಳರು, ನೋಡುತ್ತಿರಿ, ಇವನನ್ನು ಮುಗಿಸುತ್ತಾರೆ, ನಮ್ಮನ್ನೂ ಮುಗಿಸುತ್ತಾರೆ, ಕೊನೆಗೆ ಕಲ್ಯಾಣವನ್ನೂ.

## ೧೬. ಸಂಕವ್ವೆ

ಅಣ್ಣನವರು ಈ ಕಲ್ಯಾಣದಲ್ಲಿ ಮನೆ ಮಾತು. ಅವರನ್ನು ನೋಡದೇ ಇರೋರು ಯಾರು ? ನಾನು ನೆರೆಹೊರೆಯವರನ್ನ ಕೇಳಿದೆ: "ನಾವೂ, ಅಣ್ಣನವರನ್ನ ಕಾಣಬೋದೆ ?" ನಾವೂ ಅಂತ ಯಾಕೆ ಹೇಳಿದೆ ಅಂದ್ರೆ ನಾವು ಸೂಳೇರು. ಎಲ್ಲರೂ ಅಂದ್ರು : ಸೂರ್ಯನ್ನ ನೋಡೋಕೆ ಯಾರ ಅಪ್ಪಣೆ ಬೇಕು ? ಹಾಗೇ ಅಣ್ಣನವರನ್ನೂ. ಅಷ್ಟೇ ಅಲ್ಲ ಯಾರೂ ಬೇಕಾದ್ರು– ಹೆಂಗಸ್ರೂ ಸೈ– ಅವರ ಮನೆಗೆ ಹೋಗಬೋದು. ವಿಭೂತಿ ಹಚ್ಚಿಕೊಂಡು ಹೋದರೆ ಆಯಿತು. ನಾವು ಅವರಿಗೆ ಶರಣು ಹೇಳುವ ಮೊದಲೇ ಅವರೇ ಶರಣಾರ್ಥಿ ಅಂತಾರೆ." ಆದರೆ ನನಗೆ ಯಾವುದೋ ಪಾಪದ ನಾಚಿಕೆ. ಇಷ್ಟೇ ನನ್ನ ಪುಣ್ಯ ಅಂತ ದೂರದಿಂದಲೇ ಕೈ ಮುಗೀತಿದ್ದೆ. ಅಷ್ಟಕ್ಕೇ ನನಗೆ ಎಷ್ಟೋ ಸಂತೋಷ.

ನಗು ಬರ್ತಾ ಇದೆ– ನನ್ನ ಜೊತೆ ಮಲಗಿದೋರಲ್ಲಿ ಎಷ್ಟೋ ಜನ ಜಂಗಮರು ! ಲೆಕ್ಕ ಇಲ್ಲದಷ್ಟು ಅಂತ ಅನ್ನೋಲ್ಲ. ಲೆಕ್ಕ ಇದೆ. ಒಬ್ಬೊಬ್ಬ ಜಂಗಮನೂ ಒಂದೊಂದು ಹೊನ್ನು ಒತ್ತೆ ಇಡ್ತಾ ಇದ್ದ. ನಾನು ಒಂದನ್ನೂ ಕಳೀದೆ ಜೋಪಾನ ಮಾಡಿದ್ದೇನೆ. ಅವನ್ನ ಲೆಕ್ಕ ಮಾಡಿದರೆ ಆಯಿತಲ್ಲ.

ಜಂಗಮರು ಕೊಟ್ಟ ಹೊನ್ನನ್ನ ನಾನು ಕಣ್ಣಿಗೆ ಒತ್ಕೋತಾ ಇದ್ದೆ, ಅದು ನನ್ನ ಇಷ್ಟದೇವತೆ ಅನ್ನೋ ಹಾಗೆ. ಆಮೇಲೆ ಎದೇ ಕೋಟೇಲಿ ಭದ್ರವಾಗಿ ಬಚ್ಚಿಡ್ತಾ ಇದ್ದೆ. ಒಮ್ಮೆ ಒಬ್ಬ ಜಂಗಮ "ಅಬ್ಬ, ಹೊನ್ನು ಅಂದ್ರೆ ಎಂಥ ಭಕ್ತಿ, ನಿನ್ನ ಇಷ್ಟಲಿಂಗ ಅಂದ್ರೆ ಅದೇಯೋ" ಅಂತ ಅವನು ಹಚ್ಚಿಕೊಂಡಿದ್ದ ವಿಭೂತಿಯೆಲ್ಲ ಉದುರಿ ಬೀಳೋಹಾಗೆ ನಗ್ತಾ ಹೇಳ್ದ, ಏನೋ ದೊಡ್ಡ ಹಾಸ್ಯದ ಮಾತು ಅನ್ನೋ ಹಾಂಗೆ. ತನಗೇ ಗೊತ್ತಿಲ್ದೆ ಅವನು ನಿಜಾನೆ ಹೇಳಿದ್ದ.

ಒಂದೊಂದು ಹೊನ್ನೂ ನನಗೆ ದೇವರೇ. ಯಾಕೇಂದ್ರೆ ಅದು ಬಸವಣ್ಣೋರ ಕೈ ಮುಟ್ಟಿದ್ದು, ಅದನ್ನಲ್ಲದೆ ಇನ್ನು ಯಾವುದನ್ನ ಪೂಜಿಸೋದು ?

ಅವರು ಕಲ್ಯಾಣಕ್ಕೆ ಬಂದ ಮೇಲೆ ಈ ಊರಲ್ಲಿ ಹಾಡು ಚಿಗುರಿತು, ಹೂ ಬಿಟ್ಟಿತು, ಫಲ ಕೊಟ್ಟಿತು. ಎಷ್ಟು ರೀತಿ ಹಾಡುಗಳು, ಎಷ್ಟು ಜನ ಹಾಡೋರು. ಜನಗಳೇ ಕಟ್ಟಿದ ಈ ಹಾಡುಗಳು ಎಷ್ಟು ಸುಲಭ. ಎಂಥ ಮಧುರ. ಹೆಣ್ಣು ಮಕ್ಕಳೂ ಹಾಡು ಕಟ್ಟಿದರು— ಧೈರ್ಯ ವಾಗಿ ಎಲ್ಲಿ ಅಂದರೆ ಅಲ್ಲಿ ಹಾಡಿದರು. ನಾವು, ಹೆಣ್ಣುಮಕ್ಕಳು, ಮನುಷ್ಯರು ಅಂತ ಗೊತ್ತಾದದ್ದೇ ಅಣ್ಣನವರು ಈ ಊರಿಗೆ ಬಂದ ಮೇಲೆ.

ಒಂದು ಮಧ್ಯಾಹ್ನ ತುಂಬ ಸುಖವಾದ ಭಾವನೆ ಎದೇಲಿ. ತಲೆಯೂ ಹಗುರವಾಗಿತ್ತು. ಮನೇಲಿ ನಾನೊಬ್ಳೇ. ಅಮ್ಮ ಸತ್ತ ಮೇಲೆ ಇನ್ನು ನನಗೆ ಸಂಗಾತಿ ಯಾರು ? ಮನೆ ಕೆಲಸ ಊಟ ಎಲ್ಲ ಮುಗಿದಿತ್ತು. ಏನೂ ಕಾರಣಾನೇ ಇಲ್ದೆ ಮನಸ್ಸಿನ ತುಂಬ ಸುಖದ ಹೊಳೆ ಹರೀತಿತ್ತು. ನನಗೆ ತಿಳಿದಿದ್ದ ಹಾಡುಗಳನ್ನೆಲ್ಲ ಅಂದುಕೊಂಡೆ. ನಾನೂ ಯಾಕೆ ಹಾಡು ಕಟ್ಟಬಾರದು ? ಏನೇನೂ ಕಷ್ಟ ಪಡದೆ ಎದೆಯ ಆಳದಿಂದ ಮೂಡಿಬಂತು ಒಂದು ಹಾಡು: "ಒತ್ತೆಯ ಹಿಡಿಧು ಮತ್ತೊತ್ತೆಯ ಹಿಡಿಯೆ । ಹಿಡಿದರೆ ಬತ್ತಲೆ ನಿಲಿಸಿ ಕೊಲುವರಯ್ಯಾ । ವ್ರತಹೀನನರಿದು ಬೆರೆವಡೆ ಕಾದ। ಕತ್ತಿಯಲಿ ಕೈ ಕಿವಿ ಮೂಗ ಕೊಯ್ವರಯ್ಯಾ । ಒಲ್ಲೆನೊಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ॥"

ಹಾಡುತ್ತಲೇ ಇದ್ದೆ. ನನ್ನದೇ ಹಾಡು ತಾನೆ, ಮನ ಬಿರಿದು ಹಾಡಿದ್ದನ್ನೇ ಹಾಡುತ್ತಿದ್ದೆ. ಅಂದದ್ದನ್ನೇ ಬೇರೆ ಬೇರೆ ರೀತಿ ಅನ್ನು ತ್ತಿದ್ದೆ. ತೆರೆದೇ ಇದ್ದ ಮುಂಬಾಗಿಲಿನಿಂದ ಆ ಬೇಸಗೆ ಮಧ್ಯಾಹ್ನ ಇದ್ದಕ್ಕಿದ್ದ ಹಾಗೆ ತಂಗಾಳಿ ಬೀಸಿದ ಹಾಗಾಯ್ತು. ನನಗೆ ತುಂಬ ಬೇಕಾದವರು ಯಾರೋ ಬಂದು ನಿಂತ ಹಾಗೆ, ನಿಧಿ ಸಿಕ್ಕಿದ ಹಾಗೆ,

ನಿಜ ಕನಸು ಎಲ್ಲ ಬೆರೆತ ಹಾಗೆ ಏನೇನೋ ಆಯ್ತು. ತಲೆ ಎತ್ತಿ ನೋಡ್ತೀನಿ– ಅಣ್ಣನವರು. ಬೆಳಕಿನ ಬೊಂಬೆಯ ಹಾಗೆ ನಿಂತಿದ್ದಾರೆ. ನೆಲ ಬಾಯಿ ಬಿಟ್ಟದ್ದರೆ ಅಲ್ಲೇ ಅಡಗಿಬಿಡುತ್ತಿದ್ದೆ. ಹಾಡು ಗಟ್ಟಿಯಾಗಿ ಹೆಪ್ಪುಗಟ್ಟಬಿಟ್ಟದೆ. ಕಾಲು ಏಳುತ್ತಿಲ್ಲ, ಕೈ ಜೋಡಿಸಲೂ ಆಗುತ್ತಿಲ್ಲ. ಅಣ್ಣನವರು "ಮಗಳೇ" ಎಂದರು. ಅಮ್ಮ ಒಬ್ಬಳನ್ನು ಬಿಟ್ಟರೆ ನನ್ನನ್ನು ಯಾರೂ ಮಗಳೇ ಎಂದು ಕರೆದಿರಲಿಲ್ಲ. ಅವರ ಧ್ವನಿ ತಾಯಿ ಹಕ್ಕಿಯ ಕಾವಿನಂತಿತ್ತು. ಆದರ ಎದುರು ಹಾಡು ಮತ್ತೆ ಹೊನಲಾಯಿತು. ಅವರು ದೊಡ್ಡವರು, ತುಂಬ ದೊಡ್ಡವರು, ಎಂದೂ ನಾನು ಅವರನ್ನು ಮಾತನಾಡಿಸಿಲ್ಲ, ಅವರೆದರು ಹಾಡಬಾರದು ಇಂಥ ಯಾವ ಭಾವನೆಯೂ ಹಾಡಿನ ಹೊನಲಿಗೆ ಅಡ್ಡಗಟ್ಟಿ ಕಟ್ಟಲಿಲ್ಲ. ಲಜ್ಜೆ ಕೊಚ್ಚಿ ಹೋಗಿತ್ತು. ಕೈ ಕಾಲುಗಳು ಅಲುಗಿದುವು. ಮತ್ತೆ ಅದೇ ಹಾಡನ್ನೇ ಹಾಡಿದೆ. ಅವರು ನಿಂತೇ ಕಣ್ಮುಚ್ಚಿ ಕೇಳಿದರು. ಅವರು ಕೇಳಿದರು ಎಂದೂ ಅನ್ನುವಂತಿಲ್ಲ, ಒಳಗಿನ ಯಾರಿಗೋ ಕೇಳಿಸುತ್ತಿದ್ದಾರೆ ಅನ್ನಿಸಿತು.

ಅವರು ಕಣ್ಣು ಬಿಟ್ಟರು, ಬೆಳಕು ಹರಿದಂತೆ. ನನಗೂ ಎಚ್ಚರವಾಯಿತು. ಎದ್ದು, ಸರಸರನೆ ಬಾಗಿ ಅವರ ಕಾಲು ಹಿಡಿದೆ. ಅವರು "ಕಾಲು ಮುಟ್ಟಬಾರದು" ಎಂದರು. ನಾನು ಬೇರೆಯೇ ವ್ಯಕ್ತಿಯಾಗಿಬಿಟ್ಟೆ. ಬಿಲ್ಲಿನಂತೆ ಸೆಡೆತು ನಿಂತೆ. "ನಿಮಗೆ ಕೂಡ ಅವರು ಮುಟ್ಟಬಹುದು, ಇವರು ಮುಟ್ಟಬಾರದು ಎಂಬ ಭೇದ ಭಾವ ಉಳಿದಿದೆಯೇ ?" ಎಂದು ಕೇಳಿದೆ. ಅವರು ನಕ್ಕರು, ಜ್ಞಾನಿಗಳಂತೆ, ಹುಚ್ಚರಂತೆ ತುಂಬ ಹೊತ್ತು ನಕ್ಕರು. ನನ್ನನ್ನು ನೋಡಿ ನಗುತ್ತಿದ್ದಾರೆಯೋ, ತಮ್ಮನ್ನೇ ನೋಡಿ ನಗುತ್ತಿದ್ದಾರೆಯೋ ಅದೂ ತಿಳಿಯುವಂತಿರಲಿಲ್ಲ. ನನ್ನ ತಲೆ ಸವರುತ್ತಾ ಹೇಳಿದರು : "ಹಾಗಲ್ಲ ಮಗಳೇ, ಯಾರೂ ನನ್ನ ಕಾಲು ಮುಟ್ಟ ನಮಸ್ಕರಿಸುವುದು ನನಗಿಷ್ಟವಿಲ್ಲ. ಪ್ರತಿಯೊಂದು ಜೀವವೂ ನನಗಿಂತ ಹಿರಿಯದು. ನಾನು ಎಲ್ಲರಿಗಿಂತ ಕಿರಿಯ."

ನನ್ನ ಮಂಕು ಬುದ್ಧಿಗೆ ಮರ್ಯಾದೆ ಹೊಳೆದೇ ಇರಲಿಲ್ಲ. ಚಾಪೆ ಉರುಳಿಸಿ "ಕುಳ್ಳಿರಿ" ಎಂದೆ. ಕುಳಿತರು. "ಹಾಲು ಕೊಡಲೆ?" ಎಂದೆ. "ಏನೂ ಆಗುತ್ತದೆ" ಎಂದರು. ನಾನು ಮುನ್ನಾದಿನ ಮಾಡಿದ ಉಂಡಿ ಇತ್ತು. ಕೊಟ್ಟೆ. ಮುರಿದು ಒಂದು ಚೂರು ಬಾಯಿಗೆ ಎಸೆದುಕೊಂಡ್ರು. ಒಂದು ತಂಬಿಗೆ ಪೂರಾ ನೀರು ಕುಡಿದ್ರು. ಮುಂದೆ ಮಾತಾಡಿದ್ದೆಲ್ಲ ಅವರೇ. ಅರಮನೆಗೆ ಹೋಗ್ತಾ ಇದ್ರಂತೆ. ನನ್ನ ಹಾಡು ಕಿವಿಗೆ ಇಂಪಾಗಿ ಕೇಳ್ತಂತೆ. ಒಳಕ್ಕೆ ಬಂದರಂತೆ. ಎಷ್ಟೋ ಹೊತ್ತು ಹಾಡು ಕೇಳ್ತಾ ನಿಂತೇ ಇದ್ರಂತೆ. "ಇದು ಯಾರು ಕಟ್ಟಿದ ಹಾಡು?" ಎಂದು ಕೇಳಿದ್ರು. "ಸ್ವಾಮೀ, ಇದೂ ಒಂದು ಹಾಡೇ?" "ಊರ ತುಂಬ ಜನ ಇಂಥದನ್ನು ಕಟ್ಟುತ್ತಿದ್ದಾರೆ ತಾಯಿ. ಇದನ್ನ ವಚನ ಅನ್ನುತ್ತೇವೆ." ಮತ್ತೆ ಮಾತಿಲ್ಲ. "ನಿನ್ನ ಹೆಸರೇನು?" "ಸೂಳೆ ಸಂಕವ್ವ." ನಾನು ಹೇಳಿದ್ದು ಅವರ ಕಿವಿಗೆ ಪೂರ ಕೇಳಿತೋ ಇಲ್ಲವೋ. ಅವರ ಮಾತಿನಲ್ಲಿ ನೋವು ಇತ್ತು. "ಇನ್ನೂ ಇಂಥ ಹಾಡು ಬೇಕಾದಷ್ಟು ಕಟ್ಟು ಸಂಕವ್ವ" ಅಂದ್ರು. ಅವರು "ಹೊತ್ತಾಯ್ತು, ಇಗೋ ಹೊರಟೆ" ಎಂದು ಎದ್ದರು. ನನ್ನ ದೇಹದ ಶಕ್ತಿ ನನ್ನನ್ನು ಬಿಟ್ಟು ಹೋಗ್ತಾ ಇದೆ ಅನ್ನಿಸ್ತು. ನಾನು "ಅಣ್ಣಾ, ಸ್ವಲ್ಪ ಇರಿ" ಎಂದು ಎದ್ದು ಒಳಗೆ ಹೋಗಿ ಹೊನ್ನಿನ ಚೀಲ ತಂದೆ. ಹೊನ್ನನ್ನೆಲ್ಲ ಅವರ ಪಾದದ ಮೇಲೆ ಸುರಿದೆ. ಅವರು "ಇದೇನು ತಾಯಿ?" ಅಂದ್ರು. "ಸ್ವಾಮಿ, ತಮ್ಮ ಪೂಜೆಗೆ, ದಾಸೋಹಕ್ಕೆ ಆಗುತ್ತೆ ಒಪ್ಪಿಸಿಕೊಳ್ಳಿ" ಅಂದೆ. ಅವರು "ನಾನು ಇನ್ನೊಬ್ಬರ ಹೊನ್ನಿನ ಮೇಲಿನ ಧೂಳನ್ನೂ ಮುಟ್ಟೋವನಲ್ಲ. ಅದು ನನ್ನ ವ್ರತ. ಶಿವ ನನ್ನ ಪಾಲಿಗೆ ದಿನಾ ಹೊನ್ನಿನ ಮಳೆ ಕರೀತಾ ಇದಾನೆ. ಇದ್ದೂ ನನ್ನ ವ್ರತ ಮುರಿದರೆ ಶಿವದ್ರೋಹ ಆಗುತ್ತೆ" ಅಂದು ಬಿಟ್ಟರು. ಸ್ವಲ್ಪ ಹೊತ್ತು ನನ್ನ ಪುಟ್ಟ ಮನೆಯ ಸೂರು ನೋಡುತ್ತಾ ನಿಂತರು. ನಾನು "ಸ್ವಾಮಿ, ಅದು ತಮ್ಮದೇ ಹೊನ್ನು" ಅಂತ ಅನ್ನೋಣ ಅಂತ

ಹೊರಟೆ. ಬಾಯಿ ಕಟ್ಟಿ ಹೋಗಿತ್ತು. ಅವರು ನನ್ನ ಹರಕೆ ಒಪ್ಪಿ ಕೊಳ್ಳಲಿಲ್ಲ ಅಂತಲೋ, ಹೊರಟ್ಹೋಗ್ತಾರೆ ಅಂತಲೋ ನನ್ನ ಕಣ್ಣು ತುಂಬ ನೀರು. ತಡೆಹಿಡಿದಿದ್ದೆ. ಅವರ ಕಣ್ಣಿನಿಂದ ನಾಲ್ಕು ಹನಿ ನೀರು ಉದುರಿದ್ದೋ. "ಅವ್ವ, ಶಿವ ಈ ಲೋಕದಲ್ಲಿ ಸೃಷ್ಟಿ ಮಾಡಿರೋ ಹೊನ್ನಿನಲ್ಲಿ ನೂರನೇ ಒಂದು ಭಾಗದಷ್ಟು ಒಳ್ಳೆ ಜನರನ್ನ ಸೃಷ್ಟಿ ಮಾಡಿದ್ರೆ ಈ ಭೂಲೋಕಾನೇ ಕೈಲಾಸ ಆಗ್ತಿತ್ತು" ಅಂದ್ರು. ಅವರ ಕಣ್ಣಲ್ಲಿ ತೊಟ್ಟಿಕ್ಕಿದ ನೀರು ನನ್ನ ಕಣ್ಣಲ್ಲಿ ಹೊಳೆ ಹರಿಯಿತು.

ಅವರು ಅರಮನೆ ಆನೇ ಥರ ನಡೆದು ಹೊರಟರು. ಅವರು ಒಳಕ್ಕೆ ಬಂದದ್ದನ್ನ ಯಾರೋ ನೋಡಿರಬೇಕು. ಬಾಗ್ಲಲ್ಲಿ ಜನ ಜಾತ್ರೆ ನೆರೆದಿತ್ತು. ಅವರೆಲ್ಲ ಅಣ್ಣನವರ ಕಾಲಿಗೆ 'ಬೇಡ ಬೇಡ' ಅಂದರೂ ಅಡ್ಡ ಬಿದ್ರು. ಅಣ್ಣನವರು ಅವರಿಗೆಲ್ಲ ಬಾಗಿ ನಮಸ್ಕಾರ ಮಾಡಿ 'ಶರಣು, ಶರಣಾರ್ಥಿ' ಅಂದರು. ಜನ ಅವರನ್ನ "ಹಿರಿಯರು, ದೊಡ್ಡೋರು, ದೇವರು, ಮಹಾನುಭಾವರು" ಅಂದರು.

ಅವರು ಹೋಗೋವಾಗ ಅವನ ಕೀರ್ತಿ ನನ್ನ ಕಿವೀನ ತುಂಬಿತು. ಅವರು ಹೋದ ಮೇಲೆ ನನ್ನ ಮನಸ್ಸನ್ನೆಲ್ಲ ಅವರ ಮೂರ್ತಿ ತುಂಬಿದೆ. ನನ್ನ ಮನೆಯ ತುಂಬ ಅವರ ಮೂರ್ತಿಯ ಬೆಳಕು, ಅದರ ಶಾಖವೇ. ಅದನ್ನು ದಾಟ ಯಾವ ಪ್ರಾಣಿಯೂ ಇನ್ನೂ ಒಳಕ್ಕೆ ಕಾಲಿಟ್ಟಿಲ್ಲ.

## ೧೭. ನಾರಾಯಣ ಕ್ರಮಿತ

ಅವನು ವೇಶ್ಯೆಯರ ಮನೆಗೆ ಹೋಗುತ್ತಿದ್ದ. ಆ ಕೇರಿಯಲ್ಲಿ ಯಾರನ್ನೂ ಬೇಕಾದರೂ ಕೇಳಿ. ಸಂಕವ್ವೆ ಅವನ ಪ್ರೀತಿಯ ಹೆಣ್ಣು. ಸ್ವಾಮಿ, ಮನೇಲಿ ಅಷ್ಟು ಮುದ್ದಾದ ಹೆಂಡಿರಿದ್ದಾರೆ. ಇದು ನ್ಯಾಯಾನಾ ಹೇಳಿ. ಸೂಳೇ ಮನೆಯೂ ಒಂದೇ ಅರಮನೆಯೂ ಒಂದೇ ಅವನಿಗೆ. ಅಲ್ಲಿಂದ ಅರಮನೆಗೆ ನೇರವಾಗಿ ಹೋಗ್ತಾನೆ. ಕಣ್ಣಾರೆ ಕಂಡದ್ದನ್ನ ಅರಸರಿಗೆ ಒಂದು ದಿನ ಹೇಳೇ ಬಿಟ್ಟೆ. ಅವರು ಏನು ಮಾಡಿದರು ಅಂತೀರಿ? ನಕ್ಕರು. ಹೇಳಿದರು: "ಕ್ರಮಿತರೇ, ಅಣ್ಣನವರು ಎಲ್ಲಗೆ ಹೋಗುತ್ತಾರೆ, ಎಲ್ಲಿಂದ ಬರುತ್ತಾರೆ ಅನ್ನೋದನ್ನ ಕಾಯೋದೇ ನಿಮ್ಮ ಕಸುಬಾಯಿತಲ್ಲ. ಇನ್ನು ನಿಮ್ಮ ಆಹ್ನಿಕ ಅಧ್ಯಯನ ಇವೆಲ್ಲ ಯಾವಾಗ ಮಾಡ್ತೀರಿ?" ತುಂಬಿದ ಸಭೇಲಿ ಹೀಗಂದ್ರು ಸ್ವಾಮಿ. ರಾಜರು ಆಡೋ ಮಾತೇ ಇದು?

ನಮ್ಮ ಜಾತೀಲೇ ಅವನು ಹುಟ್ಟಿದ್ದು, ದಂಡಕ್ಕೆ. ಮರಕ್ಕೆ ಕುತ್ತು ಯಾವುದು? ಮರವೇ ತಾನೆ? ಅದರದೇ ಕಾವು ತಾನೆ ಕೊಡಲಿಗೆ ಹಿಡಿಯಾಗೋದು? ಹಾಗೇ ಇವನು. ಬ್ರಾಹ್ಮಣ್ಯಾನ ನಾಶಾ ಮಾಡೋಕೇ ಹುಟ್ಟಿದಾನೆ. ಅದಕ್ಕೆ ಎಷ್ಟು ದಾರಿಗಳನ್ನ ಕಡಿದಿದ್ದಾನೆ ಅಂತೀರಿ. ಯಜ್ಞ ಯಾಗ ಯಾವುದೂ ನಡೀಕೂಡದು ಅಂತಾನೆ. ಅವನು ಅದಕ್ಕೆ ವಚನ ಹೇಳ್ತಾನೆ. "ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು, ಎಲೆ ಹೋತೇ ಅಳು ಕಂಡೆಯಾ. ವೇದವ ನೋದಿದವರ ಮುಂದೆ ಅಳು ಕಂಡೆಯಾ, ಹೋತೆ. ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡೆಯಾ. ನೀನತ್ತುದಕ್ಕೆ ತಕ್ಕದ್ದು ಮಾಡುವ ಕೂಡಲ ಸಂಗಮ ದೇವ."

ಬ್ರಾಹ್ಮಣ ಕೀಳು, ಹೊಲೆಯ ಮೇಲು ಅಂತಾನಲ್ಲ, ಇವನ ಬಾಯಲ್ಲಿ ಹುಳ ಬೀಳೋಲ್ವೆ ಹೇಳಿ. ಹತ್ತಾರು ಥರ ಪೂಜೆ, ಪುರ

ಸ್ಕಾರ, ಶ್ರಾದ್ಧ ಹೋಮ ಅಂತ ನಮಗೆ ಜೀವನಕ್ಕೆ ದಾರಿ ಇತ್ತು. ಇವನ ಪ್ರಕಾರ ಅವೆಲ್ಲಾ ಕೆಲಸಕ್ಕೆ ಬಾರದ ಕರ್ಮಗಳು. "ಭಕ್ತಿಯಿಂದ ನೀವೆ ಪೂಜೆ ಮಾಡಿರಯ್ಯಾ. ಬ್ರಾಹ್ಮಣರ ಕೈಲಿ, ಅವರಿವರ ಕೈಲಿ ಮಾಡಿಸೋದು ಅಂದ್ರೆ ಏನು ಕೂಲಿ ಕೆಲಸವೇ ಅದು" ಅಂತ ಉಪ ದೇಶ ಮಾಡ್ತಾನೆ. ಇನ್ನೂ ಮುಂದೆ ಹೋಗಿ ಹೇಳ್ತಾನೆ: "ತಾನು ಮಾಡಬೇಕಾದ ಊಟಾನ ಇನ್ನೊಬ್ಬರ ಕೈಲಿ ಮಾಡಿಸೋಕೆ ಆಗುತ್ಯೆ? ತಾನು ಅನುಭವಿಸಬೇಕಾದ ರತಿ ಸುಖಾನ ಇನ್ನೊಬ್ಬರ ಕೈಲಿ ಮಾಡ್ಸಿ ನೋಡೋಣ." ಇದಕ್ಕೆ ಯಾರು ಉತ್ತರ ಕೊಡೋರು. ಇನ್ನು ನಮ್ಮ ಜೀವನ ನಡ್ಯೋದು ಹ್ಯಾಗೆ? ನನ್ನೊಬ್ಬನ ಮಾತು ಬಿಡಿ. ನನ್ನಂಥ ವರು ನೂರಾರು ಜನ. ವೇದ ಓದಿದ್ವು, ಶಾಸ್ತ್ರ ಓದಿದ್ವು, ಮದ್ವೆ, ಪೂಜೆ ಶ್ರಾದ್ಧ-ಎಲ್ಲಾದರ ಮಂತ್ರಾನೂ ಕಲಿತ್ವು-ಅವು ಅನ್ನಕ್ಕೆ ದಾರಿ ಮಾಡಿದ್ವು. ಈಗ ನಮ್ಮ ಅನ್ನಕ್ಕೇ ಕಲ್ಲು ಹಾಕಿಬಿಟ್ಟನಲ್ಲ.

ಇವನು ಕಲ್ಯಾಣಕ್ಕೆ ಬಂದ, ಅರ್ಥ ಇರೋದು, ಇಲ್ಲದೇ ಇರೋದು ನೂರಾರು ಮಾತು ಹೇಳಿದ. ವಿವೇಕ ಇರೋರು, ಇಲ್ಲ ದೋರು ಎಲ್ಲ ಇವನ ತಾಳಕ್ಕೆ ಕುಣೀತಿದಾರೆ. ಹೊಲೇರು ಹೋಗ್ಲಿ, ಬ್ರಾಹ್ಮಣರು ವೈಶ್ಯರು ಕ್ಷತ್ರಿಯರು ಶೂದ್ರರು ಎಲ್ಲಾರಿಗೂ ಇವನ ಮಾತು ಈಗ ವೇದ. "ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೆಲ್ಲ ಕುಲಜರು ಅಂತಾರೆ ಅಣ್ಣನವರು. ಅದೀಗ ಚಿನ್ನದಂಥ ಮಾತು" ಅಂತಾರಲ್ಲ ಈ ಜನ. ಇವರಿಗೆಲ್ಲ ಬದುಕೋ ದಾರಿ ತಿಳಿದಿದೆಯೇ, ಹೇಳಿ.

ಇವನ ಮನಸ್ಸಿನಲ್ಲಿ ಇನ್ನೂ ಏನೇನಿದೆಯೋ ಅದು ದೇವರಿಗಾದರೂ ಗೊತ್ತೋ ಅದೂ ಇಲ್ವೋ. ರಾಜರ ಹಣ ಸೂರೆ ಆಗ್ತಾ ಇದೆ, ಹೊಲ ಗೇರಿ, ಸೂಳೆಗೇರಿ, ಅಗ್ರಹಾರ, ಅರಮನೆ ಎಲ್ಲಾ ಒಂದೇ ಆಗ್ತಾ ಇದೆ. ಇನ್ನು ಬ್ರಾಹ್ಮಣ್ಯ ಉಳಿಯುತ್ಯೆ? ಬ್ರಾಹ್ಮಣ್ಯ ಉಳಿಸ್ತೇವೆ ಅಂತ

ಪ್ರತಿಜ್ಞೆ ಮಾಡಿ ಶಾಸ್ತ್ರಾಧ್ಯಯನ ಮಾಡಿದೆವಲ್ಲ, ಏನಾಯ್ತು ನಮ್ಮ ಪ್ರತಿಜ್ಞೆ ?

ಇಲ್ಲ, ಇವನು ಉಳಿಯಬಾರದು. ಇವನಿದ್ದರೆ ಹೊಟ್ಟೆಗೂ ಇಲ್ಲ ಬಟ್ಟೆಗೂ ಇಲ್ಲ. ಧರ್ಮವೂ ಹೋಯ್ತು, ಕರ್ಮವೂ ಹೋಯ್ತು. ಇವನನ್ನ ತೆಗೆಯಲೇ ಬೇಕು. ಈ ಧೂಮಕೇತು ಕಲ್ಯಾಣದಲ್ಲಿ ಕಾಣಿಸಿ ಕೊಂಡದ್ದು ಯಾರ ಒಳ್ಳೇದಕ್ಕೂ ಅಲ್ಲ.

## ೧೮. ಅಂಬಿಗರ ಚೌಡಯ್ಯ

ಸುಮ್ನೆ ಅರಮನೆಗ್ಹೋಗಿ, ಬನ್ನಿ, ಶಿವಪೂಜೆ ಮಾಡ್ಕೋತಾ ಕೂತಿರಿ, ಉಳಿದದ್ದೆಲ್ಲ ನಾ ನೋಡ್ಕತೀನಿ ಅಂದ್ರೆ ಈ ಅಯ್ಯ ಕೇಳ ಬೇಕಲ್ಲ. ಇದು ಹಾಲು ಇದು ನೀರು ಅಂತ ತಿಳಿಯೋ ಹಾಗಿಲ್ಲ ಇವರಿಗೆ. ಜ್ಞಾನಿಗಳು ಹೌದಪಾ, ಲಿಂಗದ ವಿಷಯಕ್ಕೆ. ಮಹಾನು ಭಾವರೂ ಹೌದಪಾ, ಎಲ್ಲಾ ಜೀವಿಗಳ್ಗೂ ಒಳ್ಳೇದಾಗ್ಲಿ ಅನ್ನೋದರಲ್ಲಿ. ಆದರೆ ಇದು ಲೋಕ. ಸುತ್ತ ಇರೋರು ಲೋಕದ ಜನ. ಕಾದ ಕಬ್ಬಿಣಕ್ಕೆ ರೂಪ ಕೊಡೋಕೆ ಬಡೀಬೇಕೆ ಹೊರತು ಮುದ್ದು ಮಾಡೋಕಾಗುತ್ಯೆ ? ನ್ಯಾಯ ನೀವೇ ಹೇಳಿ, ನನ್ನನ್ನ ಒರಟ ಅಂತಾರೆ.

ಈ ಜನದ ಸ್ವಭಾವ ನಿಮಗೇ ಗೊತ್ತಲ್ಲ. 'ಈ ದೋಣಿಗೆ ಹತ್ತು ಜನ ಮಾತ್ರ ಹತ್ತಿ, ಅಷ್ಟೇ ಜನರ ಭಾರ ತಡೆಯೋಕಾಗೋದು ಇದಕ್ಕೆ' ಅಂತ ಹೇಳಿ, ಇಪ್ಪತ್ತು ಜನ ಧುಮುಕುತ್ತಾರೆ ಅದರೊಳಕ್ಕೆ. ದೋಣಿ ಮುಳುಗದೆ ಇನ್ನೇನಾಗುತ್ತೆ ? ನಾನು ಅಂಬಿಗ, ಹತ್ತು ಜನರನ್ನ ಆಚೆ ದಡಕ್ಕೆ ಸಾಗಿಸಬೇಕು, ದೋಣೀನೂ ಉಳಿಸಬೇಕು, ನಾನೂ ಉಳೀಬೇಕು. ಅದಕ್ಕೇ ಹೆಚ್ಚಿನ ಹತ್ತು ಜನರನ್ನ ಅನಾಮತ್ತಾಗಿ ಎತ್ತಿ ಆಚೆಗೆ ಹಾಕ್ತೇನೆ.

ಅಣ್ಣನವರ ಕೈಲಿ ಅದು ಆಗೋದಿಲ್ಲ. ಇಲ್ಲಿಗೆ ಬರೋರಲ್ಲಿ ಒಬ್ಬ ಸಜ್ಜನ ಆದ್ರೆ ನೂರು ಜನ ಮಿಂಡರು, ಐನೂರು ಜನ ಭಂಡರು. ಅವರು ತಾವೂ ಮುಳುಗ್ತಾರೆ, ಅಣ್ಣನವರನ್ನೂ ಮುಳುಗಿಸ್ತಾರೆ, ಬೇಕಾದ್ರೆ ನೋಡ್ತಾ ಇರಿ. ಮಡಿವಾಳ ಮಾಚಯ್ಯನವರು ಇವರ ಮುಖಕ್ಕೇ ರಾಚಿದರಲ್ಲ: "ಅಯ್ಯಾ, ಕಂಡವ ತಿಂದು, ಹೆಂಡವ ಕುಡಿದು, ರಂಡಿಯ ಸಂಪರ್ಕವ ಮಾಡಿ ತಪ್ಪಿಗೆ ದಂಡವ ಕೊಡುವ ಜಗಭಂಡ ತಾಯಿಗ್ಗಂಡ ಹೆಂಡಗಾರರಿಗೆ, ಸದ್ಭಕ್ತರು ಸಿದ್ಧವೀರ ಮಾಹೇಶ್ವರರು ಎಂದು ಮನದಲ್ಲಿ ಭಾವಿಸಿದಡೆ ಹುಳುಗೊಂಡದಲ್ಲಿಕ್ಕುವ

ಕಾಣಾ ನಿಮ್ಮ ಶರಣ ಕಲಿದೇವರ ದೇವಾ." ಆದದ್ದೇನು? ಅಣ್ಣನವರು ಮೋಹಕವಾಗಿ ನಕ್ಕು ಹೇಳಿದರು: "ಮಾಚಯ್ಯನವರೇ ನಿಮ್ಮ ಬಾಯಲ್ಲಿ ಕೆಟ್ಟ ಮಾತು ಬರಬಾರದು. ಇಂದು ಸಟೆಯ ಭಕ್ತರಾದ ವರು ನಾಳೆ ದಿಟದ ಭಕ್ತರಾಗುತ್ತಾರೆ." ಆಗುತ್ತಾರೆ, ಆಗುತ್ತಾರೆ. ನನಗೆ ತಲೆಯಿಂದ ಕಾಲಿನವರೆಗೂ ಉರಿದು ಹೋಯಿತು. ಮಾತಾಡು ವಂತಿಲ್ಲ, ಸುಮ್ಮನಾದೆ.

ಏಕೆ ಮಾತಾಡಬಾರದು? ಬಹಳ ಒಳ್ಳೆಪ್ರಶ್ನೆ. ಅಣ್ಣನವರಿಗೆ ಯಾರೂ ಹೆದರೋದಿಲ್ಲ, ಆದರೆ ಅವರ ನಗೆ–ಮುಗುಳುನಗೆ, ಮಾಯಾ ಜಾಲ. ನಮ್ಮ ಒರಟುತನವನ್ನ ಅದೇ ಮೃದು ಮಾಡಿಬಿಡುತ್ತೆ, ಮಾತೂ ನಿಂತುಹೋಗುತ್ತೆ.

ಆದರೆ ನಮ್ಮ ಮಾತೂ ಎಷ್ಟುದಿನ ಅಡಗಿರೋದು ಸಾಧ್ಯ, ಹೇಳಿ. ಈ ಲಿಂಗವಂತರ ಬುದ್ಧಿ ಸ್ವಲ್ಪ ನೋಡ್ತೀರಾ? ಅಣ್ಣನವರು ಹೇಳಿದ್ದು: ಎಲ್ಲ ಲಿಂಗವಂತರೂ ಒಂದೇ, ಮೇಲಿಲ್ಲ, ಕೀಳಿಲ್ಲ. ಲಿಂಗವಂತರಾಗೋಕೆ ಮುಂಚೆ ಅವರ ಜಾತಿ ಯಾವುದೇ ಆಗಿರಲಿ, ಲಿಂಗವಂತರಾದ ಮೇಲೆ ಎಲ್ಲರೂ ಜೊತೇಲಿ ಕೂತು ಉಣ್ಣಬೇಕು, ಪರಸ್ಪರ ಹೆಣ್ಣುಕೊಟ್ಟು ತಂದು ಮಾಡಬೇಕು. ಕೇಳಬೇಕಲ್ಲ ಈ ಹೊಸಾ ಬ್ರಾಂಬರು. ಶಿಷ್ಯರ ಮನೆಗೆ ಹೋಗಿ, ಪಡಿಕೊಡಿ ಬೇರೆ ಅಡುಗೆ ಮಾಡಿಕೊಳ್ತೀವೆ ಅಂತಾರಂತೆ. ಕೇಳಿ ಕಿಡಿ ಕಿಡಿ ಆದೆ ನಾನು. ನನಗೆ ಯಾರದೇನು ಹಂಗು? ಅಣ್ಣನವರ ಮನೇಲಿ ದಾಸೋಹ ನಡೀ ತಿದ್ದಾಗಲೇ ಹೇಳಿಬಿಟ್ಟೆ: "ಕುಲಹೀನ ಶಿಷ್ಯಂಗೆ ಅನುಗ್ರಹ ಮಾಡಿ, ತಿರುಗಿ ಅವನ ಮನೆಯಲ್ಲಿ ಉಣಬಾರದೆಂದು, ಅಕ್ಕಿ ಕಣಕನ ತಕ್ಕೊಂಡು ಹೋಗುವ ಗುರುವನು ಕಂಡರೆ, ಕೆಡವಿ ಹಾಕಿ ಮೂಗನೇ ಕೊಯ್ದು, ಇಷ್ಟಲಿಂಗಿಯ ಕಲ್ಲಿಲೆ ತಿಕ್ಕಿ, ಸಾಸಿವೆ ಹಿಟ್ಟನೆ ತಳಿದು, ಮೇಲೆ ನಿಂಬೆಯ ಹುಳಿಯನೆ ಹಿಂಡಿ ಪಡುವಲ ಗಾಳಿಗೆ ಹಿಡಿಯಬೇಕು."

ಯಾವಾಗಲೂ ಶಾಂತಮೂರ್ತಿಯಾಗಿರೋ ಅಣ್ಣನವರು ಕೆರಳಿ ಬಿಟ್ಟರು. ಕಪಟಿಗಳಾದೋರು ತಲೆತಗ್ಗಿಸಿ ನಿಂತಿದ್ದರು. ಇನ್ನು ಈ ಮನೆಯೊಳಕ್ಕೆ ಕಾಲಿಡಬೇಡ ಅಂತ ಅಣ್ಣನವರು ಅಂದಿದ್ದರೆ ನನಗೆ ಆಶ್ಚರ್ಯವೂ ಆಗುತ್ತಿರಲಿಲ್ಲ, ನೋವೂ ಆಗುತ್ತಿರಲಿಲ್ಲ. ಬದಲಿಗೆ ಅಣ್ಣನವರು ತಮ್ಮ ಕೋಪವನ್ನು ಆಗಿದು ತಿಂದು ಹೀಗಂದರು: "ಚೌಡಯ್ಯನವರೇ ಮೃದುವಚನವೇ ಜಪ ತಪ ಎಲ್ಲ." ನನಗೆ ಮೆಟ್ಟಿನಲ್ಲಿ ಹೊಡೆದ ಹಾಗಾಯಿತು. ತಿಂಗಳ ಕಾಲ ಅಣ್ಣನವರ ಮುಂದೆ ಸುಳಿದಿದ್ದರೆ ಕೇಳಿ.

ಅವರು ದೊಡ್ಡವರು. ಯಾಕೆ ಅಂತೀರಾ? ನಮ್ಮಂಥ ಸಣ್ಣವರನ್ನ ದೊಡ್ಡವರ ಥರಾ ನಡೆಸಿಕೊಂಡವರು ಅವರು. ಆದರೆ ಈ ಲೋಕ ಅಂಥವರಿಗಲ್ಲ.

## ೧೯. ಚನ್ನಪ್ಪ ಹಿರೇಗೌಡ

ಬನ್ರೀಪಾ ಬನ್ನಿ. ನಿಮ್ಮದೇ ಹಾದಿ ನೋಡ್ತಾ ಇದೀನಿ. ಅಣ್ಣನವರು ಹ್ಯಾಂಗೆ ಅಂತ ಅವ್ರನ್ನ ಇವ್ರನ್ನ ಕೇಳ್ಕೋತಾ ಇದೀರಂತೆ. ಇನ್ನೂ ಇಲ್ಲಿಗ್ಯಾಕ ಬರಲಿಲ್ಲಾಂತ ತಲ್ಯಾಗ ಹುಳ ಹೊಕ್ಕಿತ್ತು. ಬಂದ್ರಲ್ಲ. ಆತು ಬಿಡಿ.

ಅಂವ ಬೆರಕೀ ಆದಾನ್ರಿ. ಎಲ್ಲಾ ಬ್ರಾಂಬ್ರದ್ದೇ ಆಟ ಕಟ್ಯಾನ ನೋಡ್ರಿ. ಯಾಕಂತೀರಾ ? ಅಂವ ಹುಟ್ಟಾ ಬ್ರಾಹ್ಮಣ. ಒಂದೊಂದೇ ನೋಡ್ರಿ. ಜನಿವಾರ ಬ್ಯಾಡ ಅಂದವ–ದಾರಾ ಇಟ್ಟ, ಗಂಟೆಗೆ ಬದಲು ಅದಕೊಂದು ಲಿಂಗಾಂತ ಕಟ್ಟಿದ. ಅಲ್ರೀ, ಬಾಯಾಗ ಭಕ್ತಿ ಸಾಕು, ಶಿವ ಅದ್ಕೇ ಮೆಚ್ಕೋತಾನೇ ಅಂದ್ಮೇಲೆ, ಶಿವದಾರ ಯಾಕೆ, ಮ್ಯಾಲೆ ಲಿಂಗ ಯಾಕೆ ? ಹೋಯ್ತು, ಲಿಂಗನ ಯಾಕ ?, ಕವಡಿ ಆಗದ ? ಅಂವ ಹಿಂದಕ ಶಿವ ಬ್ರಾಹ್ಮಣರೀ. ಒಳಗಿಂದೊಳಗೇ ಇನ್ನೊಂದು ಬಗಿ ಬ್ರಾಹ್ಮಣಿಕೆ ಮಾಡ್ಲಾಕ ಹತ್ತಾನ್ರಿ. ನಾನೂ ಭಾಳಾ ಶಾಸ್ತ್ರ ಓದೀನಿ, ದೇಶ ಸುತ್ತೀನಿ–ಈಗ್ಲೂ ಹತ್ತು ಮಂದಿ ಹುಡುಗರ್ಗೆ ಕಲಿಸ್ತೀನ್ರಿ. ಎಲ್ಲಾ ಕಡೆ ಬ್ರಾಂಬ್ರು ಇದೇ ಕೆಲ್ಸಾ ಮಾಡೋವ್ರು.

ಭಕ್ತ ಅನ್ನೋವಂಗೆ, ವಿರಕ್ತ ಅನ್ನೋವಂಗೆ ಹೆಂಡ್ರು ಯಾಕ್ರಿ ? ಒಂದಲ್ಲಾಂತ ಎಲ್ಡು ಹೆಂಡಿರ್ನ ಕಟ್ಕೊಂಡನ್ರಿ. ಆತು, ಅವನ ಹಣೇ ಬರ. ಸರಿ, ಎಲ್ಡೂ ಹೆಂಡರ್ನ ಒಂದೇ ಮನೀಂದ ಯಾಕ ತಂದ ? ಯಾಕ ತಂದ ಅಂತ ಕೇಳ್ತೀನಿ. ಒಂದು ಮೇಲ್ಜಾತಿ, ಒಂದು ಹೊಲೇರ ಜಾತೀಂದ ಯಾಕ ತರ್ಲಿಲ್ಲ ? ಹೇಳ್ರೀ. ತಿಳ್ಯಾಕಿಲ್ಲ ? ನಾ ಹೇಳ್ತೀನಿ ಕೇಳ್ರಿ. ಮಾವಂಗ ಇಬ್ರೇ ಹೆಣ್ಮಕ್ಕಳ್ರೀ–ಆಸ್ತಿ ಲಪಟಾಯಿಸಕ ಬೇಕ್ರೀ. ಮತ್ತ, ಹೊಲೇರ ಮನೇಲಿ ಉಂಹೋದು ತಿಂಬೋದು ಉಂಟ್ರಿ. ಉಳಿದ ಬ್ರಾಂಬ್ರು ಅದನ್ನ ಗುಟ್ಟಾಗೇ ಮಾಡ್ತಾ ಬಂದವ್ರಿ. ಈ ಊರಲ್ಲೇ ಅವರ ಕೆಲವರ ಹೆಸರು ಹೇಳ್ಲಾ ? ಇಂವ ಅದನ್ನು

ಹಗಲಾಗೆ ಮಾಡ್ತಾನೆ, ಅಷ್ಟೇ. ಅದು ಬರೀ ವೇಷಾ ಕಟ್ಟಾಕ್ರೀ. ಅಲ್ಲಾ, ಕೂಡ್ರಿ. ನಾನೇನರ ಅವನ ದಾಯಾದಿ ಅದೀನಾ? ನ್ಯಾಯ ಅಂದ್ರ ನ್ಯಾಯ–ನಾನು ಈಗ ಅವನ್ನ ಪತ್ತೇ ಹಚ್ಚಲಿಕ್ಕೆ ಅವಂದೇ ಜಾತಿ ಸೇರಿನ್ರಿ, ಕೂಡ್ರೀ.

ಏನ ಹೇಳಕ ಹೊಂಟೇಂದ್ರ, ಹಾಂ ಉಂಬೋದು ತಿಂಬೋದು ಹೊಲೇರ ಜಾತಿ ಎಲ್ಲ ತನ್ನ ಕಡೇ ಮಾಡ್ಕೊಳಕ್ರೀ. ನೀವ ಏನಾರ ಹೇಳ್ರೀ–ಅವನ ಕಣ್ಣ ಸಿಂಹಾಸನದ ಮ್ಯಾಲ ಅದೇರೀ. ನಾನೇ ನಂದೇಂತ ಬರೆದು ಇಟ್ಕೊಳ್ರಿ. ಆ ಬಿಜ್ಜಳ ಮಳ್ಳ. ಅವನ್ನ ಇಳಸ್ತಾನ, ಇಂವ ಹತ್ತತಾನ.

ಇಂವ ಬಂದಾನ್ರೀ. ಬ್ರಾಂಬ್ರು ಅಂತಾರ–ಅಣ್ಣ ನೀ ಹಿಂದಕ ನಮದೇ ಜಾತೀಲಿ ಹುಟ್ಟಿದವ ಅದೀ. ನಾವೂ ನೀವೂ ಒಂದೇ, ಮುಟ್ಟಿಹಾಕಣ ಈ ಶೂದ್ರ ಮುಂಡೇವನ್ನ, ಈ ಹೊಲೇರನ್ನ ಅಂತಾರ್ರಿ. ನಾನೇನಂದೇಂತ ಬರೆನು ಇಟ್ಟುಕೊಳ್ರಿ–ನಾಳೆ ಇವರೆಲ್ಲ ಒಂದೇ–ಆದಕೇರಿ ನಾನೂ ಇವರ ಕಡೆ ಕಣ್ಣಿಟ್ಟದೀನ್ರಿ.

ಬಾಳ ಶಾಣ್ಯಾ ಆದಾನ್ರೀ, ಈ ಮಗ ಬಾಳ ಶಾಣ್ಯ. ಇವನ ಮನೆ ವ್ಯವಹಾರ ನೋಡೋದು ಯಾರೂಂತ ತಿಳ್ಕಂಡಿದಿರಿ–ಹಡಪದವನೂ ಅಲ್ಲ, ಮಡಿವಾಳನೂ ಅಲ್ಲ, ಅಂಬಿಗನೂ ಅಲ್ಲ–ಬ್ರಾಂಬ್ರವನ್ರೀ! ಯಾಕ್ರಿ ಹಂಗ್ ಕಣ್ ಕಣ್ ಬಿಡತೀರಿ? ಆದೂ ಖಾಸ ಅಳಿಯಾರೀ. ಚನ್ನಬಸವಣ್ಣ ಅಂತ–ಬೇರೆಯವರ ಕೈಯಾಗ ಕೀಲಿಕೊಡೋ ಮಂದಿ ಅಲ್ರಿ ಅಂವ.

ಆತು, ಯಾವೋನ ಮನ್ಯಾಗ ಯಾವೋನೋ ಉಣ್ಣಲೀ; ಯಾವಂದೋ ಮಗಳ ಯಾವನ ಮಗನೋ ಲಗ್ನ ಆಗಲೀ ಇವನಿಗೆ ಹೋಗೋದೇನಾದರೂ ಐತ್ರಿ? ಏನೂ ಇಲ್ರಿ–ಚೆನ್ನಬಸಣ್ಣನಿಗಾದ್ರೂ ಕೆಳಜಾತಿಯಿಂದ ಹೆಣ್ಣು ತಂದನೇನ್ರಿ? ಇವನಿಗೆಲ್ರಿ ಮಕ್ಕಳು?

ಅದೂ ಇದೂ ಗದ್ದಲಾ ಆಗಬೇಕ , ಬಿಜ್ಜಳ ಸಾಯಲಿಕೇಬೇಕ, ಇಂವ ಕಿರೀಟ ಹಾಕ್ಕಳಿಕೇ ಬೇಕ.

ಆಮ್ಯಾಲೆ ಜಾತಿ ಬರ್ತೈತಿ. ಮೇಲು ಕೀಳು ಬರ್ತೈತಿ, ಬಡವ ಸಿರಿವಂತ ಅಂತ ಬರ್ತೈತಿ, ಎಲ್ಲಾ ಹಿಂದಿನ್ಹಾಗೇನ್ರಿ. ಬ್ರಾಹ್ಮಣ ಅಂದ ಮ್ಯಾಗೆ ಸುಡೋಗಂಟ ಬ್ರಾಹ್ಮಣಾನೆ ಖರೇರ್ರಿ.

ಯಾಕಪಾಂದ್ರ–ಎಲ್ಲ ಬ್ರಾಂಬ್ರ ತಲೀ. ಕೇಳೋ ಮಂದಿ ಸುದಾ ದಡ್ಡ ಶೂದ್ರ ಮುಂಡೇವು, ಹೊಲೆ ಮುಂಡೇವು. ನಾ ತಲಿ ಚಚ್ಚಿ ಕೊಂಡ್ರೆ ಬರಿ ಮಂಡೆ ನೋವಷ್ಟೇರಿ ನಂಗೆ.

ಇವನ್ನ ಬೆರಕಿ ಅಂದ್ನೆಲ್ಲಾ, ನೋಡಿ. ಇಂವ ದುಡಿಮೆನ ಹೊಗಳೊಕ್ಕೆ ಹೊಂಟ. ಅದನ್ನ ದೊಡ್ಡದಾಗಿ ಕಾಯಕ ಅಂದ. ಅದಿಲ್ಲದೆ ಕೈಲಾಸ ಸಿಗೋಲ್ಲ ಅಂದ. ಎಲ್ಲ ಮೈ ಮುರಿದು, ಬೆವರು ಹರಿಸಿ, ಉಣಬೇಕು ಅಂದ. ಕೂಲಿಜನ ಇಂವ ತಮ್ಮ ಕಸುಬನ್ನ ಹೊಗಳ್ತಾನೆ ಅಂತ ಇವನ್ನ ಮೆಚ್ಚಿಕೊಂಡ್ರು, ಇವನ ಹಿಂದೆ ಹೋದ್ರು. ಆದ್ರೆ ಇಂವ ಮಾಡ್ತಿರೋದು ಏನ್ರಿ. ಬೆಳಗೆದ್ದರೆ ಶಿವಪೂಜೆ, ಮಧ್ಯಾಹ್ನ ಅರಮನೆ ಲೆಕ್ಕ ಬರೆಯೋದು, ರಾತ್ರಿ ಶಿವಭಜನೆ. ಬಾಕಿ ಬ್ರಾಂಬ್ರು ಮಾಡ್ತಿದ್ದದ್ದೂ ಇದೇ ಅಲ್ವೇನ್ರಿ. ವೇದ ಓದಿಕೋತಿದ್ರ, ದೇವಸ್ಥಾನ ದಲ್ಲಿ, ಮನೆಗಳಲ್ಲಿ ಪೂಜೆ ಮಾಡ್ತಿದ್ರ, ಓದು ಬರಹದ ಕೆಲಸ ಸಿಕ್ಕಿದ್ರೆ ಮಾಡ್ತಿದ್ರ. ಇಂವ ಮಾಡಿದ್ದು ಇದೇ ಅಲ್ವಾ. ಇದ್ಯಾವ ಕಾಯಕ ? ಅರಮನೆ ಕೆಲಸ ಬಿಟ್ಟು, ಊರ ಹೊರಗೆ ಎರಡೆಕ್ರೆ ಹೊಲ ತಗೊಂಡು ಉತ್ತು ಬೆಳೆದು ಅದರಿಂದ ದಾಸೋಹ ಮಾಡಿದ್ದಿದ್ರೆ ನಾನು ಸೈ ಅಂತಿದ್ದೆ. ಅವನ್ನ ಹೆಗಲ ಮೇಲೆ ಹೊತ್ಕೊಂಡು ಬೀದಿ ಬೀದಿಲಿ ಮೆರಸ್ತಿದ್ದೆ. ಅಂವ ಎಷ್ಟಾದರೂ ಬ್ರಾಹ್ಮಣ ಅಲ್ವೇನ್ರಿ, ಬ್ರಾಂಬ್ರ ಕೈ ಎಂದಾದರೂ ನೊಗ ಹಿಡಿದಿತ್ತೇ, ಹಿಡಿಯತ್ತೈೕ, ಇಂವ ಹಿಡಿಯಾಕೆ ? ಇದು ಬೆರಕಿ ಅಲ್ದೆ ಇನ್ನೇನ್ರೀ ?

## ೨೦. ಬೈರಾಗಿ

ಈ ಹಾಳು ಮಂಟಪಕ್ಕೂ ಹುಡುಕಿಕೊಂಡು ಬಂದು ಯಾಕಪ್ಪಾ ನನ್ನನ್ನು ಕಾಡುತ್ತೀರಾ? ನನಗೆ ಊರಿಲ್ಲ, ಹೆಸರಿಲ್ಲ, ನಾನು ಯಾರೂ ಅಲ್ಲ. ನಾನು ಯಾವ ವರ್ಣಕ್ಕೂ ಸೇರಿದವನಲ್ಲ. ನಾನು ಏನೂ ಅಲ್ಲ. ನಿಮಗೆ ಏನು ಬೇಕು? ಅಣ್ಣನವರ ವಿಷಯವೆ? ನಿಮಗೆಷ್ಟು ಗೊತ್ತೋ ನನಗೂ ಅಷ್ಟೇ ಗೊತ್ತು. ಹಾಗಲ್ಲ, ನಿಮಗೇ ಹೆಚ್ಚು ಗೊತ್ತಿರಬಹುದು.

ನಾನು ಊರೂರು ಅಲೆಯುತ್ತಾ ಇಲ್ಲಿಗೆ ಬಂದೆ. ಇಲ್ಲಿ ಕೋಲಾಹಲ ಹೆಚ್ಚಾಗಿತ್ತು. ಏನೋ ಹೊಸದು ನಡೆಯುತ್ತದೆ ಎಂದು ಜನ ಹೇಳಿದರು. ಹೊಸದು ಅನ್ನೋ ಕುತೂಹಲಕ್ಕೆ ಇಲ್ಲಿ ಬಹಳ ದಿನ ನಿಂತೆ. ಎಲ್ಲೂ ಮೂರು ರಾತ್ರಿಯ ಮೇಲೆ ತಂಗದವನು ಇಲ್ಲಿ ಮೂವತ್ತು ರಾತ್ರಿ ತಂಗಿದೆ. ಮೂರು ರಾತ್ರಿಯ ಮೇಲೆ ಒಂದು ಕಡೆ ತಂಗಬಾರದು ಎಂಬ ನಿಯಮಕ್ಕೆ ತಾನೆ ನಾನು ಏಕೆ ಆಳಾಗಬೇಕು ಎನ್ನಿಸಿತು. ಅದನ್ನು ಮುರಿದೆ. ನನಗೆ ದುಃಖವೂ ಇಲ್ಲ, ಸಂತೋಷವೂ ಇಲ್ಲ. ಹೊರಟುಹೋಗುತ್ತೇನೆ, ಮನಸ್ಸು ಬಂದಾಗ.

ನಾನು ಊರಾಚೆ ಇದ್ದು ಎಲ್ಲವನ್ನೂ ನೋಡುತ್ತಿದ್ದೇನೆ. ಅರಸರಿಗೆ ಅಣ್ಣನವರಲ್ಲಿ ಪ್ರೀತಿ–ಭಯ ಎರಡೂ. ಅಣ್ಣನವರು ಪ್ರಾಮಾಣಿಕರು, ಪರಮ ಪ್ರಾಮಾಣಿಕರು. ಪ್ರೀತಿಯನ್ನು, ಅದು ಇಲ್ಲದ ಕಡೆಯೂ ಉಕ್ಕಿ ಹರಿಸುವ ಶಕ್ತಿ ಉಳ್ಳವರು. ಆದ್ದರಿಂದ ಅವರನ್ನು ಪ್ರೀತಿಸದೆ ಇರುವುದು ಸಾಧ್ಯವೇ ಇಲ್ಲ. ಅಲ್ಲದೆ ಅಣ್ಣನವರಿಗೂ ಅರಸರಲ್ಲಿ ತುಂಬ ವಿಶ್ವಾಸ, ನಿಷ್ಠೆ. ಕೊಳು–ಕೊಡೆಯ ಸಂಬಂಧದಿಂದ ಪ್ರಾರಂಭವಾಗಿ ಅದನ್ನು ಮೀರಿ ಎತ್ತರದಲ್ಲಿ ನಿಂತ ಬಾಂಧವ್ಯ ಅವರದ್ದು. ಅರಸರು ಅವರಿಗೆ ಅಧಿಕಾರ ಕೊಟ್ಟಿದ್ದಾರೆ, ಹೊನ್ನು ಕೊಡುತ್ತಾರೆ, ಅದರಿಂದ ಅವರ ಪೂಜೆ ಪುರಸ್ಕಾರ, ದಾಸೋಹ ನಡೆಯುತ್ತವೆ. ಅರಸರಿ

ಗಾದರೂ ಅಷ್ಟೆ, ಅಂಥ ಇನ್ನೊಬ್ಬ ಪ್ರಾಮಾಣಿಕ ಬೊಕ್ಕಸದ ಅಧಿಕಾರಿ ದೊರಕುವುದು ಸುಲಭದ ಮಾತಲ್ಲ. ಅಲ್ಲದೆ ಸಾವಿರಾರು ಜನರಿಗೆ ಅಣ್ಣನ ಮಾತು ಎಂದರೆ ಶಿವನ ಮಾತು. ಅರಸರು ಜಾಣರು. ಅವರಿಗೆ ಜನಬಲ ಬೇಡವೆ ? ಅವರೂ ಸಾರ್ವಭೌಮತ್ವವನ್ನು ಆಕ್ರಮಿಸಿಕೊಂಡ ವರು. ಅದನ್ನು ಉಳಿಸಿಕೊಳ್ಳುವ ಆಸೆ ಅವರಿಗೆ ಸಹಜವೇ. ಅದಕ್ಕೆ ಬಸವಣ್ಣನವರ ನೆರವೂ ಬೇಕು. ಇಂಥದೆಲ್ಲಾ ಲೆಕ್ಕಾಚಾರದ ಅಂಟು ಇವರ ಸ್ನೇಹ ಉಳಿಸಿದೆ ಎಂದಲ್ಲ. ಪ್ರಾರಂಭಕ್ಕೆ ಆದದ್ದು ಹೀಗೆ. ಈಗ ಇಬ್ಬರದೂ ಬಿಡಿಸಲಾರದ ನಂಟು.

ಇನ್ನು ಭಯ ಏಕೆ ಅಂದಿರಾ ? ಇಬ್ಬರೂ ಮೊಸಳೆಯ ಮೇಲೆ ಕೂತು ಹೊಳೆ ದಾಟುತ್ತಿರುವವರೇ ! "ಅಣ್ಣನವರ ಹಿಂದೆ ಇಷ್ಟು ಜನ ಇದ್ದಾರೆ, ಅದೂ ಇದೇ ಊರಿನಲ್ಲಿ ತುಂಬಿಕೊಂಡಿದ್ದಾರೆ. ನಾಳೆ ಅವರು ಸಿಂಹಾಸನ ಬಯಸಿದರೆ ನಿನ್ನ ಗತಿ ಏನು ?" ಎಂದು ನೂರಾರು ಜನ ಹಗಲೂ ರಾತ್ರಿ ಬಿಜ್ಜಳನ ಕಿವಿಯಲ್ಲಿ ತಿರುವ ಮುರುವ ಮಾಡಿ ಪ್ರಶ್ನೆಗಳನ್ನು ಸುರಿಯುತ್ತಿದ್ದಾರೆ. ಈಗೇನೋ ಅವನದು ಒಂದೇ ಉತ್ತರ: "ನಾನೇ ಕರೆದು ಕೊಟ್ಟರೂ, ನಾನೇ ರಾಜ್ಯಾಭಿಷೇಕ ಮಾಡಿದರೂ ಅವರು ಸಿಂಹಾಸನವನ್ನು ಒಲ್ಲರು." ಆದರೆ ಅದೇ ಕಿವಿಗೆ ಅದೇ ಮಾತನ್ನು ಅದೇ ಜನವಲ್ಲದೆ ಬೇರೆ ಬೇರೆ ಜನರೂ ಇಡುಕುತ್ತಿದ್ದರೆ ಅದೇ ದೊರೆಗೆ ನಿಜವಾಗಿ ಕಾಡಬಹುದು.

ಅವನ ಭಯಕ್ಕೆ ಇನ್ನೂ ಹೆಚ್ಚಿನ ಕಾರಣ ಇದೆ. ತೀರ ಕೆಳಗಿನವರನ್ನು ಮೇಲಕ್ಕೆ ತರುವ ಭರದಲ್ಲಿ ಮೇಲಿರುವವರ ಸ್ಥಿತಿಯನ್ನು ಅಣ್ಣನವರು ಅರ್ಥಮಾಡಿಕೊಳ್ಳುತ್ತಿಲ್ಲ. ಅವರೆಲ್ಲರ ಸಾವಿರಾರು ವರ್ಷದ ನಂಬಿಕೆಗಳನ್ನು ಇವರು ತಿರಸ್ಕಾರದಿಂದ ಕಾಣುತ್ತಾರೆ. ಅರಿಯದವರ ಮನಸ್ಸಿನಲ್ಲಿ ದ್ವೇಷವನ್ನು ಬಿತ್ತುತ್ತಿದ್ದಾರೆ. ತಿಳಿದು ಮಾಡುತ್ತಿದ್ದಾರೆ ಎಂದಲ್ಲ, ತಿಳಿಯದೆಯೇ ಮಾಡುತ್ತಿರಬಹುದು. ಆದರೆ ಆಗುತ್ತಿರುವ ಪರಿಣಾಮ ಮಾತ್ರ ಅದೇ. ಇದ್ದಕ್ಕಿದ್ದಂತೆ "ವೇದಕ್ಕೆ

ಒರೆಯು ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ, ತರ್ಕದ ಬೆನ್ನ ಬಾರ ನೆತ್ತುವೆ, ಆಗಮದ ಮೂಗ ಕೊಯ್ವೆ" ಎಂದು ಬಿಡುತ್ತಾರೆ. "ನಾರಾಯಣನೆಂಬುವನ ಕಾಣೆ, ಗೀರಾಯಣ ನೆಂಬುವನ ಕಾಣೆ" ಎನ್ನುತ್ತಾರೆ. ಇನ್ನೂ ಒರಟಾಗಿ : "ಅನ್ಯ ದೈವವ ನಂಬುವುದು ಹಾದರ ಕಾಣಿರೋ" ಎಂದು ಕೂಗುತ್ತಾರೆ. "ದೇವನೊಬ್ಬ ನಾಮ ಹಲವು" ಎಂದ ಬಾಯಲ್ಲೇ "ಹರಿಹರನೊಂದೇ ಎಂದರೆ ಸುರಿಯುವೆಬಾಯಲ್ಲಿ ಹುಳುಗಳು" ಎಂದು ಕೇಳುತ್ತಾರೆ! ಏಕೆ? ಇವರು ಇಷ್ಟು ಹೇಳಿದ್ದೇ ಸಾಕು, ಇವರ ಹಿಂಬಾಲಕರು ಇನ್ನೂ ಕೆಟ್ಟದಾಗಿ ಉಳಿದ ಮತದವರನ್ನು ನಿಂದಿಸುತ್ತಾರೆ. ಅವರು ಕಂಗಾಲಾಗಿ ಅರಸರ ಕಡೆ ನೋಡುತ್ತಾರೆ. ಅರಸರು ಹರ ಶಿವ ಅನ್ನದೆ ಕುಳಿತುಬಿಡುತ್ತಾರೆ. ಆದರೂ ಯಾರೇ ಆದರೂ ಈ ಅಪಮಾನವನ್ನು, ನಿಂದೆಯನ್ನು ಎಷ್ಟುಕಾಲ ಸಹಿಸಿಯಾರು?

ಅಣ್ಣನವರ ನಿಲುವನ್ನು ಅರಿಯಲು ನಾನು ಪ್ರಯತ್ನಿಸಿದ್ದೇನೆ. ಅವರ ಮನಸ್ಸಿನ ಪದರ ಪದರಗಳನ್ನು ಬಿಡಿಸಿ ನೋಡಲು ಕೈಲಾದದ್ದೆಲ್ಲ ಮಾಡಿದ್ದೇನೆ. ಅವರ ಮನಸ್ಸಿನಲ್ಲಿ ಏನೋ ಗೊಂದಲ ಇದೆ ಎನ್ನಿಸುತ್ತದೆ. ಎಲ್ಲ ಜಾತಿ ಭೇದಗಳನ್ನೂ ತೊಡೆಯ ಹೊರಟವರು ತಮ್ಮದೇ ಜಾತಿಯನ್ನು ಸೃಷ್ಟಿಸಿಕೊಂಡ ವಿಷಮತೆ ಈ ದೇಶದ ಚರಿತ್ರೆಗೆ ಅಂಟಿದ್ದು. ಅಣ್ಣನವರು ಇದಕ್ಕೆ ಹೊರತಾಗಲಿಲ್ಲವಲ್ಲ, ಅದು ದೊಡ್ಡ ನಷ್ಟ ಅಲ್ಲವೆ? ಹರ ವಿಶ್ವತೋ ಚಕ್ಷು, ವಿಶ್ವತೋ ಬಾಹು ಎಂದು ಅಣ್ಣನವರು ಹೇಳುತ್ತಾರೆ. ಹರ ಎಲ್ಲ ಕಡೆಯೂ ಬೆಳಕಾಗಿ ವ್ಯಾಪಿಸಿದ್ದಾನೆ ಎಂದು ಕಂಡುಕೊಂಡ ಅಣ್ಣನವರಿಗೆ ಇತರ ಮತಗಳಲ್ಲಿ, ಇತರ ಹೆಸರುಗಳಲ್ಲಿ ಅವನು ಇರಲಾರ ಎಂದು ಕಂಡಿತೆ? ಅಥವಾ ಅವನು ಅಲ್ಲಿ ಕಾಣದೇ ಹೋದನೆ? ಇಲ್ಲಿ ಬೆಳಕಾಗಿರುವವನು ಇನ್ನೊಂದು ಕಡೆ ಕತ್ತಲೆ ಆಗಿ ಬಿಡುತ್ತಾನೆಯೆ? ಶ್ರದ್ಧೆ ಅತಿರೇಕಕ್ಕೆ ಹೋದಾಗ ಕುರುಡಾಗುತ್ತದೆ. ಆ ಕುರುಡು ಇತರ ಮತಗಳಲ್ಲಿ ಕತ್ತಲನ್ನು ತೋರಿಸು

ತ್ತದೆ, ತಮ್ಮ ಮತದಲ್ಲಿರುವ ಕತ್ತಲನ್ನು ಮರೆಸುತ್ತದೆ. ಬೆಳು ದಿಂಗಳು ಹಾಲು ಚೆಲ್ಲುವಾಗ ಬೆಟ್ಟಗುಡ್ಡಗಳ ಮೇಲೂ ಬೀಳುತ್ತದೆ, ಹಳ್ಳಕೊಳ್ಳಗಳನ್ನೂ ತುಂಬುತ್ತದೆ. ಎತ್ತರದಲ್ಲಿರುವ ಅಣ್ಣನವರಿಗೆ ಈ ಸತ್ಯ ಕಾಣುತ್ತಿಲ್ಲವೆ ?

ನಾನು ಬೈರಾಗಿ, ತುಂಬ ಮಾತನಾಡಿದೆ. ಈ ದೇಶವನ್ನು ನಾನು ಬಲ್ಲೆ. ತುಂಬ ಸುತ್ತಾಡಿದ್ದೇನೆ. ಜನರ ಸ್ವಭಾವ ನನಗೆ ಗೊತ್ತಿದೆ. ಅವರಿಗೆ ಹಣಕಾಸು, ಪದವಿ, ಹೆಸರು ಎಲ್ಲ ಬೇಕು. ದೇವರು ಬೇಡ. ಒಬ್ಬರು ಶರಣರು ಹೇಳಿದರು : "ಆಸೆಗೆ ಸತ್ತುದು ಕೋಟಿ, ಆಮಿಷಕ್ಕೆ ಸತ್ತುದು ಕೋಟಿ. ಹೆಣ್ಣು ಹೊನ್ನು ಮಣ್ಣಿಗೆ ಸತ್ತುದು ಕೋಟಿ. ಆದರೆ ದೇವರಿಗಾಗಿ ಸತ್ತವರಾರನ್ನೂ ಕಾಣೆ." ಎಷ್ಟು ಸತ್ಯ. ಅಣ್ಣನವರು ಜನರನ್ನು ದೇವರಿಗಾಗಿ ಸಾಯಿರಿ ಎನ್ನುತ್ತಾರೆ. ಜನ ಕೇಳುತ್ತಾರೆಯೆ ! ದೇವರಿಗಾಗಿ ಸಾಯುವವರು ಎಲ್ಲ ಜಾತಿಗಳನ್ನೂ ಮೀರಿದ ಜಾತಿ ಎನ್ನುತ್ತಾರೆ. ಜನಕ್ಕೆ ಆ ಭಾಷೆ, ಆ ಭಾವ, ಆ ಎತ್ತರದ ನಿಲುವು ಅರ್ಥವಾಗುತ್ತದೆಯೆ ?

ಅದೋ ಎದುರು ಮಂಟಪದಲ್ಲಿ ಬೌದ್ಧ ಭಿಕ್ಷುಗಳಿದ್ದಾರೆ. ಅವರಿಂದ ಬುದ್ಧನ ವಿಷಯ, ಅವನ ಧರ್ಮದ ವಿಷಯ ಕೇಳಿದೆ. ಬುದ್ಧ ಮಾಡಿದ ಕೆಲಸವನ್ನೇ–ಜಾತಿ ನಿರ್ಮೂಲ, ಜನರನ್ನು ಮೇಲಕ್ಕೆತ್ತುವ ಕೆಲಸ–ಬಸವಣ್ಣನವರು ಕೈಗೆತ್ತಿಕೊಂಡಿದ್ದಾರೆ, ಇಷ್ಟು ಶತಮಾನಗಳ ಮೇಲೆ. ಈ ಮಧ್ಯೆ ಅಂಥ ಅಸಾಧ್ಯ ಸಾಹಸ ಮಾಡಿದವರು ಯಾರೂ ಇದ್ದಂತಿಲ್ಲ. ಒಂದು ವಿಷಾದದ ಸಂಗತಿ ಹೇಳಲೇ–ಬುದ್ಧನ ಭಿಕ್ಷುಗಳಿಗೆ ಈಗ ಭಿಕ್ಷೆ ಹುಟ್ಟುವುದೇ ಕಷ್ಟವಾಗಿದೆ ! ನನಗೆ ಹೀಗೆ ತೋರುತ್ತದೆ, ಈ ದೇಶದಲ್ಲಿ ಹೊಸದೇನೂ ಉಳಿಯುವುದಿಲ್ಲ–ಹಳೆಯದು ಹೊಸದನ್ನು ನುಂಗಿ ನೊಣೆಯುತ್ತದೆ. ಜೀವನ ಪ್ರವಾಹ ತನ್ನದೇ ಇಷ್ಟದಂತೆ ಹರಿಯುತ್ತಾ ಹೋಗುತ್ತದೆ.

## ೨೧. ಕಸವಿ ಮಂತ್ರಿ

ಕಲ್ಯಾಣದಿಂದ ಇಷ್ಟುದೂರ, ಬನವಸಿಯವರೆಗೆ, ಸುಮ್ಮನೆ ಇಷ್ಟಕ್ಕಾಗಿ ಮಾತ್ರ ಬಂದಿರಾ? ನೀವು ಮಹಾ ಸಾಹಸಿಗಳು. ಇಷ್ಟು ಮಾತ್ರ ಆದರೆ ಇದನ್ನ ಕಲ್ಯಾಣದಲ್ಲೇ ಯಾರು ಬೇಕಾದರೂ ಹೇಳುತ್ತಿದ್ದರಲ್ಲ. ಅವನ ವಿಷಯ ಹೊಸದಾಗಿ ಹೇಳುವುದು ಏನು ತಾನೆ ಇದೆ?

ಬಿಜ್ಜಳ ಅರಸರಿಗೆ ನನ್ನಲ್ಲಿ ತುಂಬ ವಿಶ್ವಾಸ ಇದೆ. ಇಲ್ಲದೇ ಹೋಗಿದ್ದರೆ ನನ್ನನ್ನ ಈ ಬನವಸಿ ಪ್ರಾಂತಕ್ಕೆ ಮಾಂಡಲೀಕನನ್ನಾಗಿ ಮಾಡುತ್ತಿದ್ದರೆ? ನಾನು ಅವರ ನಿಷ್ಠಾವಂತ ಸೇವಕ. ಮೂರನೆಯ ತೈಲಪರು ಚಕ್ರವರ್ತಿಯಾಗಿದ್ದರು. ಅವರು ಒಳ್ಳೆಯವರೇ. ಆದರೆ ಬರಿಯ ಒಳ್ಳೆಯತನ ಸಿಂಹಾಸನವನ್ನು ತುಂಬಿ ಶೋಭಿಸಲಾರದು, ಒಂದು ಸಾಮ್ರಾಜ್ಯವನ್ನು ಕಟ್ಟುನಿಟ್ಟಾಗಿಟ್ಟು ಆಳಲಾರದು. ಪೌರುಷ, ಪರಾಕ್ರಮ, ಔದಾರ್ಯ, ದುಷ್ಟಶಿಕ್ಷಣ ಶಿಷ್ಟರಕ್ಷಣಾ ಸಾಮರ್ಥ್ಯ, ಇವೆಲ್ಲದರ ಜೊತೆಗೆ ಚಾಣಾಕ್ಷತನ ಇಷ್ಟೂ ಬೇಕು ನಿಜವಾದ ಚಕ್ರವರ್ತಿಯಾಗಿ ಒಂದು ಮಹಾ ಸಾಮ್ರಾಜ್ಯವನ್ನು ತೂಗಿಸಿಕೊಂಡು ಹೋಗುವುದಕ್ಕೆ. ಇವೆಲ್ಲ ಯಥೇಚ್ಛವಾಗಿರುವುದು ಬಿಜ್ಜಳ ಅರಸರಲ್ಲಿ. ಅವನ್ನು ಮೊದಲಿಗೆ ಗುರುತಿಸಿದವರೇ ನಾವು. ಸಾರ್ವಭೌಮತ್ವದ ಬಯಕೆಯ ಕಿಡಿ ಬಿಜ್ಜಳ ಪ್ರಭುಗಳಲ್ಲಿ ಬೂದಿ ಮುಚ್ಚಿ ಹೊರಳುತ್ತಿತ್ತು. ನಾವು–ನಾನು ಮಾತ್ರ ಅಲ್ಲ, ಕರಿಯ ಕೇಸಿಮಯ್ಯನವರು, ಬರಮರಸರು, ಇನ್ನೂ ಹಲವು ಹತ್ತು ಜನ ಅರಸರ ಎದೆಯಲ್ಲಿದ್ದ ಬೂದಿಯನ್ನು ಊದಿ ಊದಿ ಕಿಡಿಯನ್ನು ಮಹಾಜ್ವಾಲೆಯಾಗಿ ಮಾಡಿದೆವು. ತೈಲಪರು ಅದರಲ್ಲಿ ಬೂದಿಯಾಗಿ ಹೋದರು. ಅದು ಎಲ್ಲರಿಗೂ ತಿಳಿದ ಕಥೆ.

ತಿಳಿಯದ ಕಥೆಯೂ ಇದೆ. ಬಿಜ್ಜಳ ಅರಸರು ಬಿಜ್ಜಳ ಚಕ್ರವರ್ತಿಯಾದರು. ಅವರ ಸಾಹಸದ ಕೀರ್ತಿ ಹತ್ತು ದಿಕ್ಕುಗಳಲ್ಲೂ

ಹರಡಿತು. ರಾಜರ ಕೀರ್ತಿಯ ಹಾಡು ಎಲ್ಲರಿಗೂ ಎಲ್ಲ ಕಾಲಕ್ಕೂ ಮಧುರವಾಗಿಯೇ ಇರುತ್ತದೆ ಎಂದು ಭಾವಿಸಿದವರು ಬೆಪ್ಪರು. ಆಗ ದವರಿಗೆ ಅದು ಹೃದಯ ಶಲ್ಯವಾಗುತ್ತದೆ. ತೈಲಪವಂಶದವರು ಪೂರ್ತಿ ನಿರ್ನಾಮವಾಗಿಲ್ಲ. ಬಿಜ್ಜಳ ಪ್ರಭುಗಳನ್ನು ಮುಗಿಸಿ ಮತ್ತೆ ತೈಲಪರ ವಂಶದವರನ್ನು ಸಿಂಹಾಸನದ ಮೇಲೆ ಕೂರಿಸಲು ಸರಿಯಾದ ಅವಕಾಶಕ್ಕೆ ಅವರು ಕಾಯುತ್ತಿದ್ದಾರೆ ಅಷ್ಟೆ. ರಾಜಕಾರಣದಲ್ಲಿ ಇಷ್ಟು ತಿಳುವಳಿಕೆ ಇಲ್ಲದವರು ಮೂರು ದಿನ ಕೂಡ ಸಿಂಹಾಸನದ ಮೇಲೆ, ಅಷ್ಟೇಕೆ, ಯಾವುದೇ ಪೀಠದ ಮೇಲೆ ಕೂರುವುದಕ್ಕೂ ಆಗುವುದಿಲ್ಲ.

ಬಸವಣ್ಣ ಅಂಥ ಅವಕಾಶವನ್ನು ಅನಾಯಾಸವಾಗಿ ಒದಗಿಸಿ ದ್ದಾನೆ. ಸಾಮ್ರಾಜ್ಯಕ್ಕೆ ನಿಜವಾದ ಕೋಟೆ ಪ್ರಜೆಗಳ ಸಮಾಧಾನ, ಶಾಂತಿ ಮತ್ತು ರಾಜನಿಷ್ಠೆ. ಅವಿದ್ದರೆ ಕೋಟೆ ಭದ್ರವಾಗಿರುತ್ತದೆ. ಉಳಿದಂತೆ ಎಂಥ ಪ್ರಬಲರಾದ ಶತ್ರುಗಳಿದ್ದರೂ ಅವರು ಕೋಟೆಯ ಹೊರಗೇ ಇರುತ್ತಾರೆ. ಅಲ್ಲಿ ಕಾಳಗ ಕೊಟ್ಟು ಅವರನ್ನು ಧೂಳೀ ಪಟ ಮಾಡಿಬಿಡಬಹುದು. ಈಗ ಕಲ್ಯಾಣ ಯಾವ ಸ್ಥಿತಿಯಲ್ಲಿದೆ ಎಂಬುದನ್ನು ನೀವು ನೋಡಿರಲೇ ಬೇಕು. ಬಸವಣ್ಣನ ಹುಚ್ಚಾಟದಿಂದ ಜನತೆಯ ಹೃದಯ ಜ್ವಾಲಾಮುಖಿಯಾಗಿದೆ. ಸನಾತನ ಧರ್ಮದ ಸೌಧ ನಿಂತಿರುವುದೇ ವರ್ಣವ್ಯವಸ್ಥೆಯ ಮೇಲೆ. ಆಡಳಿತದ ಸೌಧ ನಿಂತಿರುವುದೂ ಮೇಲು-ಕೀಳು, ಬಡವ-ಬಲ್ಲಿದ ಈ ಭೇದ ಉಳಿದೇ ಇರುವುದರ ಮೇಲೆ. ಮೊದಲನೆಯದು ಎಲ್ಲರ ಕಣ್ಣಿಗೂ ಕಾಣುತ್ತದೆ. ಎರಡನೆಯದು ಆಡಳಿತದ ಸೂಕ್ಷ್ಮ ಬಲ್ಲವನಿಗೆ ಮಾತ್ರ ತಿಳಿಯುತ್ತದೆ. ಬಸವಣ್ಣ ಸಾಮಾನ್ಯ ಅಲ್ಲ. ಅವನು ವ್ಯವಸ್ಥೆಯ ಅಸ್ತಿಭಾರವನ್ನೇ ಅಗೆದು ಇಡೀ ಸೌಧವನ್ನೇ ಉರುಳಿಸುವುದಕ್ಕೆ ಹೊರಟಿದ್ದಾನೆ. ಸೌಧ ಅವನ ಮೇಲೇ ಬೀಳುತ್ತದೆ, ನಿಜ, ಆದರೆ ಅವನ ಪಕ್ಕದಲ್ಲಿ ಪ್ರಭುಗಳೂ ನಿಂತಿದ್ದಾರೆ, ಅವರ ಪಕ್ಕದಲ್ಲಿ ನಾವೂ ನಿಂತಿದ್ದೇವೆ.

ವರ್ಣವ್ಯವಸ್ಥೆ ಸರಿಯೇ ತಪ್ಪೇ ಎಂಬುದನ್ನು ನಿರ್ಣಯಿಸುವ ಹಕ್ಕು ಪ್ರಭುಗಳಿಗೂ ಇಲ್ಲ, ಅವರ ಮಹಾ ಭಂಡಾರಿಗಳಿಗೂ ಇಲ್ಲ. ಆ ವ್ಯವಸ್ಥೆಯ ಚೌಕಟ್ಟಿನಲ್ಲಿ ಶಾಂತಿ ಸಮಾಧಾನಗಳಿಂದ ಬಾಳಿ ಬದುಕುತ್ತಿರುವ ಜನತೆಗೆ ಮಾತ್ರ ಆ ಹಕ್ಕಿದೆ. ಆ ಜನತೆ ಶಾಂತಿ, ಸಮಾಧಾನಗಳನ್ನು ಕಳೆದುಕೊಂಡಿರುವುದನ್ನು ನೀವೇ ನೋಡಿರಬೇಕು.

ಬಸವಣ್ಣ ಭಕ್ತ, ಪ್ರಾಮಾಣಿಕ, ಸ್ನೇಹಜೀವಿ–ಇವುಗಳಲ್ಲಿ ಒಂದೂ ಸುಳ್ಳಲ್ಲ. ಅವನ ರಾಜನಿಷ್ಠೆಯನ್ನು ಯಾರೂ ಶಂಕಿಸುವ ಅಗತ್ಯವೇ ಇಲ್ಲ. ಆದರೆ ನಿಷ್ಠಾವಂತ ಸೇವಕರಾಗಿದ್ದೂ ಅವರು ತಮಗೇ ತಿಳಿಯದಂತೆ ಸಿಂಹಾಸನವನ್ನು ಅಲುಗಿಸುತ್ತಿದ್ದಾರೆ. ಈ ವರ್ಣಶ್ರೇಣಿಯಲ್ಲಿ ಮೊದಲನೆಯವರು ಎಷ್ಟು ರೊಚ್ಚಿಗೆದ್ದಿದ್ದಾರೋ ಕೊನೆಯವರೂ ಅಷ್ಟೇ ರೊಚ್ಚಿಗೆದ್ದಿದ್ದಾರೆ. ಮೇಲಿನವರನ್ನು ಪ್ರತಿಭಟಿಸುವುದು ಅವರಲ್ಲಿ ಎಲ್ಲರಿಗೂ ಬೇಕಾಗಿಲ್ಲ. ನೀವೂ ಮೇಲಿನವರೂ ಒಂದೇ ಎಂಬ ಮಾತು ಅವರ ಧೈರ್ಯದ ಬೇರನ್ನು ಕತ್ತರಿಸಿಬಿಟ್ಟಿದೆ. ಅಣ್ಣನವರ ಮನಸ್ಸು ಶುದ್ಧ, ವಿಶಾಲ. ಆದರೆ ಸಾಮಾಜಿಕ ಅವ್ಯವಸ್ಥೆಯ ಪರಿಣಾಮ ಏನಾಗುತ್ತದೆ ಎಂಬುದನ್ನು ತಿಳಿಯುವ ಶಕ್ತಿ ಅವರಿಗಿಲ್ಲ. ಜನರನ್ನು, ಸಮಾಜವನ್ನು ಸುಧಾರಿಸುತ್ತೇವೆ ಎಂದು ಅವರು ಮಾಡುತ್ತಿರುವ ವರ್ಣಸಂಕರ ಜನರನ್ನು ಕ್ಷೋಭೆಗೊಳಿಸಿದೆ. ಎಂದರೆ ನಮ್ಮ ಸಾಮ್ರಾಜ್ಯದ ಕೋಟೆಯಲ್ಲಿ ಲೆಕ್ಕವಿಲ್ಲದಷ್ಟು ಕಡೆ ಬಿರುಕುಗಳು ಕಾಣಿಸಿಕೊಂಡಿವೆ. ಶತ್ರುಗಳಿಗೆ ಉಳಿದಿರುವ ಕೆಲಸ ಇಷ್ಟೇ–ಹಿಂಡು ಹಿಂಡಾಗಿ ಕಲ್ಯಾಣವನ್ನು ಪ್ರವೇಶಿಸಿ, ಜನರನ್ನು ಸಮಾಜವನ್ನು ರಕ್ಷಿಸುತ್ತೇವೆ ಎಂದು ಹೇಳಿಕೊಂಡು, ಅರಸರನ್ನು ಮುಗಿಸಿ ಸಿಂಹಾಸನವನ್ನು ಆಕ್ರಮಿಸಿಕೊಳ್ಳುವುದು.

ಅದಕ್ಕೆ ಬಸವಣ್ಣನ ಜಂಗಮ ದಾಸೋಹ ಹೆಬ್ಬಾಗಿಲನ್ನು ತೆರೆದು ಹಾಕಿದೆ. ಕೋಟೆಯೇ ಕುಸಿಯುತ್ತಿರುವಾಗ ಹೆಬ್ಬಾಗಿಲಿನ ಅಗತ್ಯವೇ ಇರಲಿಲ್ಲ ನಿಜ. ಆದರೂ ದಿಡ್ಡಿ ಬಾಗಿಲಿನ ಮೂಲಕವೇ

ಶತ್ರುಗಳು ಬರಬಹುದು. ಯಾವನೇ ಬೇಕಾದರೂ ಲಿಂಗ ಧರಿಸಿ ವಿಭೂತಿ ಹಚ್ಚಿಕೊಂಡು ರುದ್ರಾಕ್ಷಿ ಮಾಲೆ ಇಳೀ ಬಿಟ್ಟು ಕಲ್ಯಾಣಕ್ಕೆ ನುಗ್ಗ ಬಹುದು. ಅವರನ್ನು ಗುರುತು ಕೇಳುವ ಹಕ್ಕು, ಶೋಧಿಸುವ ಹಕ್ಕು ಯಾರಿಗೂ ಇಲ್ಲ. ಹಾಗೆಂದು ಬಸವಣ್ಣನ ಆಜ್ಞೆ, ಎಂದರೆ ರಾಜಾಜ್ಞೆ. ಈ ಅವಕಾಶವನ್ನು ಬಳಸಿಕೊಂಡು ಶತ್ರುಗಳ ಗೂಢಚಾರರು, ಕೊನೆಗೆ ಸಾಕ್ಷಾತ್ ಶತ್ರುಗಳೂ ತಂಡತಂಡವಾಗಿ ಕಲ್ಯಾಣದಲ್ಲಿ ಕಲೆಯುತ್ತಿರು ವುದು ನಿಮಗೂ ತಿಳಿದಿರಬಹುದಾದ ವಿಷಯ.

ಬರಮರಸರು ಬಿಜ್ಜಳ ಮಹಾಪ್ರಭುಗಳ ಅಳಿಯಂದಿರು. ನಮ್ಮಲ್ಲಿ ಅವರು ಭಂಡಾರಿಗಳು. ನಾವಿಬ್ಬರೂ ಕಳೆದ ತಿಂಗಳಷ್ಟೇ ಕಲ್ಯಾಣಕ್ಕೆ ಹೋಗಿದ್ದೆವು. ಅಲ್ಲಿನ ಸ್ಥಿತಿ.ನೋಡಿ ನಮ್ಮ ಎದೆ ಧಸ್ಸೆಂದಿತು. ಅರಸರಿಗೆ ನೇರವಾಗಿ, ನಿರ್ಭಯವಾಗಿ ಅರಿಕೆ ಮಾಡಿದೆ: "ಪ್ರಭೂ, ಈ ಕಲ್ಯಾಣ ದಲ್ಲಿ ನಿಮ್ಮಿಬ್ಬರಲ್ಲಿ ಒಬ್ಬರಿಗೇ ಜಾಗ ಇರುವುದು. ನೀವಿರುತ್ತೀರೋ ಅಣ್ಣನವರು ಇರುತ್ತಾರೋ ತಿರ್ಮಾನಿಸಿ." ಅದೊಂದೇ ಸಲ ಅಣ್ಣನ ವರನ್ನು ದೂಷಿಸಿದಾಗ ಅರಸರು ಕೋಪ ಮಾಡಿಕೊಳ್ಳದೇ ಹೋದದ್ದು. ಆದರೂ ಉಭಶುಭ ಎನ್ನಲಿಲ್ಲ. ನಾವು ಹೇಳಬಿಟ್ಟೆವು: "ಮಹಾ ಪ್ರಭೂ, ನಿಮಗೆ ಅಣ್ಣನವರೇ ಬೇಕಿದ್ದರೆ ನಮಗೆ ಅಪ್ಪಣೆ ಕೊಡಿ, ಮುಂದೆ ನಾವು ಸನ್ನಿಧಾನದಲ್ಲಿ ಕಾಣಿಸಿಕೊಳ್ಳುವುದಿಲ್ಲ." ಮಹಾಪ್ರಭುಗಳಿಗೆ ಅರ್ಥವಾಯಿತು. ಅವರ ಮುಖ ಬಾಡಿತು.

ನಾನು ಅರಸರಿಗೆ ಹಾಗೆ ಹೇಳಿದ್ದು ಸರಿಯಾಯಿತೋ ಇಲ್ಲವೋ, ಕಾಣೆ. ಆದರೆ ಈಗ ನೀವು ಹೇಳಿ, ನೀವು ಈಪತ್ತು ತಾನೆ ಕಲ್ಯಾಣ ದಿಂದ ಬಂದಿದ್ದೀರಿ. ಕಲ್ಯಾಣದಲ್ಲಿ ಯಾರು ಉಳಿಯುವ ಸಾಧ್ಯತೆ ಹೆಚ್ಚಾಗಿದೆ?

## ೨೨. ಮಡಿವಾಳ ಮಾಚಯ್ಯ

ಅಣ್ಣನವರು ಮಡಿಮಾಡಿದ ಬಟ್ಟೆ. ಅವರದು ಗರಿಗರಿಯಾದ ಶುದ್ಧ ಭಕ್ತಿ. ಅವರ ಭಕ್ತಿಯ ಕೀರ್ತಿಯೇ ನನ್ನನ್ನು ದೂರದ ಹಿಪ್ಪರಗಿಯಿಂದ ಕಲ್ಯಾಣಕ್ಕೆ ಎಳೆದು ತಂದಿತು. ಇಲ್ಲಿಗೆ ತಲುಪಿದ ದಿನವೇ ಅವರನ್ನು ಕಂಡೆ. ನಿಮ್ಮ ಕಾಯಕ ಯಾವುದು ಎಂದು ವಿಚಾರಿಸಿದರು. "ಕಾಯಕ ಎಂದರೆ ಏನು ?" ಎಂದು ಅವರನ್ನೇ ಕೇಳಿದೆ. "ಉದ್ಯೋಗ" ಎಂದರು. "ಬಟ್ಟೆ ಮಡಿಮಾಡುವುದು." "ಅದನ್ನೇ ಮಾಡಿಕೊಂಡು ಕಲ್ಯಾಣದಲ್ಲಿರಿ" ಎಂದು ಅಪ್ಪಣೆ ಮಾಡಿದರು. "ಆಗಾಗ ಮನೆಗೆ ಬನ್ನಿ, ಮಾತನಾಡೋಣ. ನಾನೂ ಬಿಡುವಾದಾಗ ನಿಮ್ಮಲ್ಲಿಗೆ ಬರುತ್ತೇನೆ" ಎಂದರು. ಒಂದು ದಿನ ನಮ್ಮ ಮನೆ ವಿಚಾರಿಸಿಕೊಂಡು ಬಂದರು. ಅಂಗೈ ಅಗಲದ ಮನೆ. ಉಬ್ಬೆಯ ವಾಸನೆ. ಯಾವುದೂ ಅವರ ಗಮನಕ್ಕೆ ಬಂದಂತೆ ಕಾಣೆ. "ಹಸಿವಾಗುತ್ತಿದೆ, ಏನಾದರೂ ಕೊಡಿ" ಎಂದರು. ರೊಟ್ಟಿಯಿತ್ತು. ಅದನ್ನೇ ತಿನ್ನುತ್ತಾ "ಏನಾದರೂ ಹೇಳಿ" ಅಂದರು. ಕಲ್ಯಾಣದ ತುಂಬ ವಚನ ಕಟ್ಟುವ ಜನರೇ. ನನಗೂ ಅದೇ ಗೀಳು ಹಿಡಿದಿತ್ತು. ಹೇಳಿದೆ: "ಎತ್ತೆತ್ತ ನೋಡಿದಡೆ ಅತ್ತತ್ತ ಬಸವನೆಂಬ ಬಳ್ಳಿ. ಎತ್ತಿ ನೋಡಿದಡೆ ಲಿಂಗವೆಂಬ ಗೊಂಚಲು, ಒತ್ತಿ ಹಿಡಿದಡೆ ಭಕ್ತಿಯೆಂಬ ರಸವಯ್ಯಾ. ಆಯತವು ಸ್ವಾಯತವು ಸನ್ನಿಹಿತವು ಬಸವಣ್ಣನಿಂದ." ಅಣ್ಣನವರು ತಿನ್ನುವುದನ್ನು ನಿಲ್ಲಿಸಿದರು. ಕೋಪದಿಂದ ಉರಿಯುತ್ತಿದ್ದರು. ದನಿ ಎತ್ತರಿಸಿ ಹೇಳಿದರು: "ನಿಲ್ಲಿಸಿ ಮಾಚಯ್ಯನವರೇ, ನಿಲ್ಲಿಸಿ. ನೀವು ನನಗಿಂತ ಎಷ್ಟೋ ಹಿರಿಯರು. ನೀವು ಕೂಡ ನನ್ನನ್ನು ಹೊಗಳಿ ಕೊಲ್ಲುತ್ತಿದ್ದೀರಲ್ಲ." ಎದ್ದು ನಿಧಾನವಾಗಿ ಹೊರಟೇ ಹೋದರು.

ಆಮೇಲೆ ನಾನು ಅವರ ಮನೆಗೇ ಹೋಗಿ ಕ್ಷಮೆ ಬೇಡಿದೆ. ಅದರ ಅಗತ್ಯ ಇರಲಿಲ್ಲ. ಅವರು ಪ್ರಸಂಗವನ್ನೇ ಮರೆತು ಬಿಟ್ಟಿದ್ದರು.

"ಊರಲ್ಲಿ ಎಷ್ಟೋ ಜನದ ಬಟ್ಟೆಗಳನ್ನ ಮಡಿ ಮಾಡ್ತೇನೆ, ನಿಮ್ಮ ಮನೆ ಬಟ್ಟೆಗಳನ್ನು ಕೊಡಿ, ಮಡಿ ಮಾಡಿಕೊಡ್ತೇನೆ" ಎಂದೆ. ಅವರು "ಬೇಡ, ನಮ್ಮ ಮನೆಯಲ್ಲಿರುವವರು ತಮ್ಮ ಬಟ್ಟೆಗಳನ್ನು ತಾವೇ ಮಡಿ ಮಾಡಿಕೊಳ್ಳಬೇಕು ಎಂಬ ವ್ರತ ಇದೆ" ಎಂದುಬಿಟ್ಟರು.

ಯಾವುದೋ ಗಳಿಗೆಯಲ್ಲಿ ಏನೋ ಭಾವದಲ್ಲಿದ್ದಾಗ "ಇನ್ನು ಮೇಲೆ ಭಕ್ತರಲ್ಲದವರ ಬಟ್ಟೆ ಮಡಿ ಮಾಡುವುದಿಲ್ಲ" ಎಂದು ಬಿಟ್ಟೆ. ಅದನ್ನು ಆಚರಣೆಗೂ ತಂದೆ. ಮಹಾರಾಜರಿಗೆ ನನ್ನ ಸೇವೆ ಮನಸ್ಸಿಗೆ ಬಂದಿತ್ತಂತೆ. ಆದರೇನು, ಅವರೂ ಭವಿ ತಾನೆ? ಇನ್ನು ಮೇಲೆ ಅರಮನೆಗೆ ಸೇವೆಗೆ ಹೋಗುವುದಿಲ್ಲ ಎಂದೆ. ಸುದ್ದಿ ತಿಳಿದು ಅರಸರು ಕಿಡಿಕಿಡಿಯಾದರಂತೆ. "ಅಗಸನಿಗೆ ಇಂಥ ದುರಹಂಕಾರವೇ? ಕ್ಷೌರಿಕರು, ಮೋಚಿಗಳು ಎಲ್ಲ ಇದೇ ದಾರಿ ಹಿಡಿದಿದ್ದಾರೆ. ಒಬ್ಬನಿಗೆ ಶಿಕ್ಷೆ ಮಾಡಿದರೆ ಉಳಿದವರಿಗೆ ಬುದ್ಧಿ ಬರುತ್ತದೆ. ಮಾಚಯ್ಯನನ್ನು ಹಿಡಿದುಕೊಂಡು ಬಂದು ಆನೆಯ ಕಾಲಿಗೆ ಕಟ್ಟಿಸಿ" ಎಂದು ಅಪ್ಪಣೆ ಮಾಡಿದರಂತೆ. ಪಕ್ಕದಲ್ಲಿದ್ದ ಅಣ್ಣನವರು: "ಮಾಚಯ್ಯನವರು ನಮಗೂ ಹಿರಿಯರು. ಕಸುಬಿನವರು ಯಾರ ಕೆಲಸ ಮಾಡಬಹುದು ಯಾರ ಕೆಲಸ ಮಾಡಕೂಡದು ಎಂಬುದು ಅವರವರ ಇಚ್ಛೆಗೆ ಸಂಬಂಧಿಸಿದ್ದು. ಯಾರೂ ಯಾರನ್ನೂ ಇಂಥದನ್ನು ಮಾಡಲೇಬೇಕು ಎಂದು ಬಲಾತ್ಕಾರ ಮಾಡುವುದು ಶಾಸನಕ್ಕೆ ವಿರೋಧವಾದದ್ದು" ಎಂದರಂತೆ. ಅರಸರು ಬುಸುಗುಟ್ಟುತ್ತಾ ಸುಮ್ಮನಾದರು. ಅರಸರ ಆಜ್ಞೆಯಾಗಿದೆ, ಕಾರ್ಯಗತ ಆಗಿಲ್ಲ. ಯಾವತ್ತು ಆಗುತ್ತೋ.

ಈಗ ಕಲ್ಯಾಣ ನನಗೆ ಬರಿಯ ನೆನಪಿನ ಬುತ್ತಿ. ಈಗ ಅಣ್ಣನವರೂ ಇಲ್ಲವಂತೆ, ಬಿಜ್ಜಳನೂ ಇಲ್ಲವಂತೆ. ಮುಪ್ಪಿನಿಂದಾಗಿ ನನ್ನ ಕಾಯಕವೂ ಇಲ್ಲ. ನನ್ನವು, ಅಣ್ಣನವರದ್ದು, ಅಕ್ಕ ಮಹಾದೇವಿಯವರದ್ದು, ಪ್ರಭುದೇವರದ್ದು, ಇನ್ನೂ ನೂರಾರು ಶರಣರ ಸಾವಿರಾರು ವಚನಗಳು ನನಗೆ ಬಾಯಲ್ಲಿದ್ದವು. ಈಗ ಒಂದೂ ನೆನಪಿಗೆ ಬರುತ್ತಿಲ್ಲ.

ಹಾಡುಗಳೆಲ್ಲ ಹರಳುಗಳಾಗಿ ಹೋಗಿ ಕಲ್ಯಾಣದ ಮಣ್ಣಿನಲ್ಲಿ ಜನರ ಕಾಲು ಚುಚ್ಚುತ್ತಿವೆ ಎನ್ನುತ್ತಾರೆ.

ಒಂದಾದರೂ ಹೇಳಬೇಕೆ? – ನನಗೆ ಬರುವುದೇ ಒಂದು. ಬೇಕೆಂದರೂ ಹಾಡುತ್ತೇನೆ, ಬೇಡವೆಂದರೂ ಹಾಡುತ್ತೇನೆ. ಆದರೆ ಹಾಡು ಚೆನ್ನಾಗಬೇಕಾದರೆ ನನಗೆ ಕಲ್ಲಿನ ಮೇಲೆ ಒಗೆತದ ಟಪ್ ಟಪ್ ಟಪ್ ತಾಳ ಬೇಕು. ಹಾಗೇ ಅನ್ನಲೇ ? ಕೇಳಿ :

"ಎತ್ತೆತ್ತ ನೋಡಿದಡೆ ಅತ್ತತ್ತ ಬಸವನೆಂಬ ಬಳ್ಳಿ. ಎತ್ತಿ ನೋಡಿದಡೆ ಲಿಂಗವೆಂಬ ಗೊಂಚಲು. ಒತ್ತಿ ಹಿಂಡಿದಡೆ ಭಕ್ತಿಯೆಂಬ ರಸವಯ್ಯಾ. ಆಯತವು ಸ್ವಾಯತವು ಸನ್ನಿಹಿತವು ಬಸವಣ್ಣನಿಂದ. ಇದ ಬಲ್ಲಿರೆ ನೀವು ಹೇಳಿರೆ. ಇತ್ತ ಬಲ್ಲಿರೆ ನೀವು ಹೇಳಿರೆ. ಬಸವ ಬಸವ ಎಂಬವರ ಭಕ್ತಿ ಶೂನ್ಯ ಕಾಣಿರೇ, ಕಲಿದೇವರ ದೇವಾ."

## ೨೩. ಜಗದೇವ

ಹೌದು, ಬಿಜ್ಜಳನನ್ನು ಕೊಂದವನು ನಾನೇ, ಬಿಜ್ಜಳನನ್ನು ಮಾತ್ರ ಅಲ್ಲ ಸ್ವಾಮಿ, ಬಸವಣ್ಣನವರನ್ನು ಕೊಂದವನೂ ನಾನೇ. ಬೆಚ್ಚಬೇಡಿ. ನನಗೂ ಹೀಗೆಲ್ಲ ಆಗುತ್ತೆ ಅಂತ ಗೊತ್ತಿರಲಿಲ್ಲ. ಈಗ ನನಗೆ ತಲೆ ಸರಿಯಿಲ್ಲವಂತೆ. ಹಾಗೇ ಎಲ್ಲ ಹೇಳೋದು. ಒಂದೊಂದ್ಸಲ ಎಲ್ಲ ಮರ್ತ್ತೇ ಹೋಗ್ತದೆ. ಅರಿವು–ಮರವು, ಅರಳು–ಮರಳು, ಹುಟ್ಟು–ಸಾವು, ಕೊಲೆ–ಹುಚ್ಚು–ಹಠ–ಎಲ್ಲ ಜೊತೆಜೊತೆ–ಅಲ್ಲ, ಎಲ್ಲ ಮಾಯೆ ಅಂತಾರಲ್ಲ.

ಬಿಜ್ಜಳನನ್ನು ಕೊಂದೆ, ಹೌದು ಕೊಂದೇ ಬಿಟ್ಟೆ. ಸ್ವಲ್ಪ ತಾಳಿ, ಯಾವ ಬಿಜ್ಜಳ ? ನಿಮ್ಮಪ್ಪ. ಹಹ್ಹ, ಅಲ್ಲವೇ, ಅಲ್ಲವೇ, ಅಲ್ಲವೇ, ಹಾಗಾದ್ರೆ ನಮ್ಮಪ್ಪ. ಅದೂ ಅಲ್ಲ. ಯಾಕೇಂದ್ರೆ ನಾನು ರಾಜಕುಮಾರ ಅಲ್ಲ. ಅವನು ಮಹಾರಾಜ. ಸಿಂಹಾಸನದ ಮೇಲೆ ತಲೆ. ತಲೆ ಮೇಲೆ ಗಂಟೆ ಮಗುಚಿ ಹಾಕಿಕೊಂಡಿದಾನೆ. ಅವನನ್ನು ತಾಳಿ, ಹೂಂ ಅವನನ್ನೇ, ನೇರವಾಗಿ ಹೋಗಿ ಇರಿದು ಕೊಂದೆ. ಗಂಡರ ಗಂಡ, ಚಾಲುಕ್ಯ ಪರಮೇಶ್ವರ, ಜಗದೇವ ಮಲ್ಲ ಮಹಾರಾಜ–ಯಾರು ? ನಾನು. ನನ್ನನ್ನು ಬಿಜ್ಜಳ ಕೊಂದ. ಇಲ್ಲ, ನಾನು ಹೋಗಿ ಮಹಾಮಂಡಲೇಶ್ವರ, ಅಲ್ಲ, ಅಲ್ಲ, ಭುಜ ಬಲ ಚಕ್ರವರ್ತಿ, ತ್ರಿಭುವನ ಮಲ್ಲ, ಮಹಾ ರಾಜಾಧಿರಾಜ, ಪಾಪಿಗಳಲ್ಲಿ ಪಾಪಿ ಬಿಜ್ಜಳ ನನ್ನು ಇಗೋ ಇದೇ ಕಠಾರಿಯಿಂದ, ಇದೋ ಹೀಗೆ, ಇರಿದು ಕೊಂದು ಬಿಟ್ಟೆ. ಬೆದರ ಬೇಡಿ, ಬೆಚ್ಚ ಬೇಡಿ–ನೀವು ಬಿಜ್ಜಳನೇ, ಅಲ್ಲ ತಾನೆ, ಹಾಗಾದರೆ ನಿಮಗೆ ಭಯ ಇಲ್ಲ. ಬಿಜ್ಜಳ ಅಲ್ಲದೆ ಬೇರೆ ಯಾರನ್ನೂ ನಾನು ಇರಿದು ಕೊಲ್ಲುವುದಿಲ್ಲ. ಭೇಷ್, ಜಗದೇವ ಮಲ್ಲ ಪ್ರಭೂ, ನೀವಲ್ಲದೆ ಇನ್ನು ಯಾರು ತಾನೆ ಈ ಭೂಮಂಡಲದಲ್ಲಿ ಒಬ್ಬ ಚಕ್ರವರ್ತಿಯನ್ನು ಸಿಂಹಾಸನದ ಮೇಲೇ ಇರಿದು ಕೊಲ್ಲಬಲ್ಲರು ?

ಬನ್ನಿ, ಬನ್ನಿ. ಯಾರು ಚಂದ್ರಚೂಡ ಶಾಸ್ತ್ರಿಗಳೋ, ಮುಕುಂದ ಪೆದ್ದಿಯವರೋ—ಯಾರಯ್ಯಾ ನಿಮ್ಮನ್ನು ಬರಹೇಳಿದ್ದು? ಬಿಜ್ಜಳ ನನ್ನು ಕೊಲ್ಲಲು ಬಂದಿರಾ?–ತುಂಬ ತಡವಾಗಿ ಬಂದಿರಿ. ಬಿಜ್ಜಳ ನನ್ನ ನಾನೇ ಮುಗಿಸಿದ್ದೇನೆ. ಅಲ್ಲವೆ? ಬಸವಣ್ಣನವರನ್ನ ಕೊಲ್ಲಲು ಬಂದಿರಾ? ಅವರನ್ನ ಆಗಲೇ ಕೊಂದಿದ್ದೀರಲ್ಲಾ! ಓಹೋ ಊಟಕ್ಕೆ ಬಂದದ್ದೋ? ನಿಮ್ಮನ್ನು ಒಳಗೆ ಬಿಟ್ಟದ್ದು ಯಾರು? ನಾನು ಬರ ಹೇಳಿದ್ದು ಬಸವಣ್ಣನವರನ್ನ. ಭಕ್ತಸಾರ್ವಭೌಮ, ವೀರಶೈವ ಮತೋ ದ್ಧಾರಕ, ಬಡ ಜಂಗಮ, ಜಂಗಮ ಪೂಜಾನಿರತ, ಇಬ್ಬರು ಹೆಂಡಿರ ಗಂಡ–ಬಸವನನ್ನ. ಎಲ್ಲಿ ಅವನು? ಅಮಾತ್ಯರೇ, ಬಸವಣ್ಣನವರನ್ನು ಬರಮಾಡಿ.

ಇಲ್ಲ. ಬಸವಣ್ಣ ಹೊರಟು ಹೋದರು. ಉಣ್ಣದೆ ಹೊರಟೇ ಹೋದರು. ನೋಡಿ, ಚಂಡಾಲರೇ, ನೋಡಿ ಸಂತೋಷಪಡಿ. ಬಸವಣ್ಣ ನನ್ನ ಊಟಕ್ಕೆ ಕರೆದೆ, ನೀವು ಬಂದು ಕೂತುಬಿಟ್ಟರಿ. ·ಅವನಿಗೆ ಕೋಪ ಬಂತು. ಹೊರಟೇ ಹೋದ. ಹೋಗಲಿ, ಅವನು ಬಸವ ತಾನೆ, ಹುಲ್ಲು ಮೇಯಲಿ.

ನೀವು ಊಟ ಮಾಡಿದ್ದು ಸಾಕು, ಏಳ್ರೋ. ಹಾಂ. ಪಾಪ, ಊಟಕ್ಕೆ ಕೂತವರನ್ನ ಏಳಿಸಬಾರದು. ಇರಲಿ. ನಾನು ಬಸವೇಶ್ವರರ ಕಾಲು ಹಿಡಿಯುತ್ತೇನೆ. ಬಾಪ್ಪ, ಬಸವಣ್ಣ, ಊಟ ಮಾಡು ಬಾ.

ಢಂ ಢಂ ಢಂ. ಬಸವಣ್ಣ ಊಟಕ್ಕೆ ಬರುತ್ತಾರೆ. ನಾನೇ ನೆಲ ಸಾರಿಸಿದ್ದೇನೆ. ಕಲ್ಯಾಣಿ ಅಳಬೇಡ. ನನಗೆ ಹುಚ್ಚಿಲ್ಲ. ಇವಳು ನನ್ನ ತಾಯಿ, ಅಲ್ಲ ಹೆಂಡತಿ. ಸದಾ ಅಳುತ್ತಾಳೆ. ನಾನು ಸದಾ ನಗುತ್ತೇನೆ.

ಸದ್ದು, ಈಗ ರಾಜ ಘೋಷಣೆ: "ಬಸವೇಶ್ವರರ ಪಾದ ಧೂಳಿ ಯಾದ ನಾನು ನನ್ನ ಜೀವವನ್ನು ಕೊಟ್ಟಾದರೂ, ಯಾರ ಜೀವವನ್ನು ತೆಗೆದಾದರೂ ನಮ್ಮ ಧರ್ಮವನ್ನು ರಕ್ಷಿಸುತ್ತೇನೆ." ಯಾರೋ ಹಾಗೆ ಬಗುಳಿದ್ದು? ನಾನಲ್ಲ, ದೇವರು. ಅಣ್ಣನವರು ಖಂಡಿತ ಅಲ್ಲ. ಅವರು

ದೇವರಂಥವರು. ದೇವರು ಕೊಲ್ಲುತ್ತಾನೆ. ಬಸವಣ್ಣ ದೇವರಲ್ಲ, ದೇವರಲ್ಲ, ದೇವರಲ್ಲ, ಖಂಡಿತ ಅಲ್ಲ. ನಮ್ಮಪ್ಪನಾಣೆ, ನಿಮ್ಮಪ್ಪ ನಾಣೆ, ಕಲ್ಯಾಣಿ ಅಪ್ಪನ ಆಣೆ. ಬಸವಣ್ಣ ದೇವರಲ್ಲ. ದೇವರಿಗಿಂತ ದೊಡ್ಡವರು. ಅವರಿಗೆ ಕೊಲ್ಲುವ ಮಾತು, ಕೊಲಿಸುವ ಮಾತು ತಿಳಿ ಯದು. ಅದೊಂದು ಮಗು. ಎಲ್ಲವನ್ನೂ ಕಣ್ಣರಳಿಸಿಕೊಂಡು ನೋಡುತ್ತದೆ.

ಹರಳಯ್ಯ–ಮಧುವಯ್ಯ ಮದುವೆ ಮಾಡಿಕೊಂಡರು. ಯಾಕ್ರೀ ನಗ್ತೀರಾ ? ನಿಮಗೆ ಕಠಾರಿ ರುಚಿ ತೋರಿಸ್ತೀನಿ—ಛೆ, ಹೆದರಬೇಡಿ. ಸಿಂಹ ಬೀಳೋದು ಆನೆ ಮೇಲೆ ಮಾತ್ರ. ನೀವು ಹಂದಿ. ಕೋಪ ಬಂತೆ ? ಹೋಗಲಿ, ನೀವು ಕುದ್ರೆ. ಥೈ ಥೈ ಥೈ, ಕುದ್ರೆ ಹತ್ತಿದೆ, ಅರಮನೆಗೆ ಹೋದೆ, ಬಿಜ್ಜಳನ್ನ ಕೊಂದೆ.

ಅಲ್ಲ, ಹರಳಯ್ಯನ ಮಗಳನ್ನ ಯಾರ ಮಗನೋ ಮದ್ವೆ ಮಾಡಿ ಕೊಂಡ. ಅದು ಅವರ ಪಾಡು. ಮದ್ವೆ ಮಾಡ್ಕೊಂಡು ಸಾಯಲಿ. ಬಿಜ್ಜಳ ನೀಚ, ನನ್ನ ಎರಡು ಕಣ್ಣು ಕೀಳಿಸಿಬಿಟ್ಟ. ನನ್ನ ಕಣ್ಣಲ್ಲ, ಇನ್ನು ಯಾರೋ ಇಬ್ಬರದ್ದು—ನಾಲ್ಕು ಕಣ್ಣು ಕೀಳಿಸಿಬಿಟ್ಟ. ಯಾಕೆ ಅಂದ್ರೆ—ಇಬ್ಬರಿಗೆ ಇದ್ದದ್ದು ನಾಲ್ಕೇ ಕಣ್ಣು. ಮಹಾರಾಜ ಆದ್ರೇನು— ಇಬ್ಬರಿಂದ ಐದು ಕಣ್ಣು ಕೀಳಿಸಬಲ್ಲನೆ ?

ತುಂಬ ನೋವಾಯಿತಂತೆ. ಅವರೇ ಹೇಳಿಕೊಂಡು ಅತ್ತರು. ಹೆಣ್ಣುಗಂಡು ಪರಾರಿ. ನನ್ನ ಅವ್ವ—ಅದ್ರ ಹೆಸ್ರೇನೇ ಕಲ್ಯಾಣಿ ? ನಿನ್ಗೂ ಮರ್ತೆ ಹೋಯ್ತು ?—ಬಿಡು ಕಷ್ಟವೇ ಕಳೀತು. ನನ್ನ ಅವ್ವ ಗಂಗಾಳದಲ್ಲಿ ಅನ್ನ ಹಾಕಲಿಲ್ಲ, ನೆಲದ ಮೇಲೆ ಸುರಿದು ಬಿಟ್ಟು 'ತಿನ್ನು, ನೀನು ನಾಯಿ, ಅಂದ್ಳು. ತಿಂದು ಬಿಟ್ಟೆ, ಯಾಕೇಂದ್ರೆ ಹಸಿವಾಗಿತ್ತು. ಎಲ್ರೂ ನಕ್ರು. "ಯಾಕವ್ವಾ, ನನ್ನ ನಾಯಿ ಅಂದೆ ?" "ನೀನು ನಾಯಿ, ನೀನು ನಾಯಿ ಕಣೋ ಜಗ್ಯಾ. ಮಾತುಕೊಟ್ಟೆ, ದೇವರಂಥ ಅಣ್ಣನವರಿಗೆ ಮಾತು ಕೊಟ್ಟೈಲ್ಲೋ ಮಗನೇ, ವೀರಶೈವ ಧರ್ಮ

ಕಾಪಾಡ್ತೀನಿ ಅಂತ. ಎಲ್ಲೋ, ಶೂರ ಆಗಿದ್ರೆ ಮಾತು ಉಳಿಸ್ಕೋ. ಎದ್ದೆ. ಧೀರನ ಹಾಗೆ ಸುತ್ತ ತಿರುಗಿ ನೋಡಿದೆ. ಕಠಾರಿ ಕಣ್ಣಿಗೆ ಬಿತ್ತು. ಹಿಡಿದೆ. ಕುದುರೆ ಏರಿದೆ, ಓಡಿಸಿದೆ, ಓಡಿಸಿದೆ. ಅರಮನೆ. ಒಂದನೇ ಬಾಗಿಲು, ಇಬ್ಬರು ಚಕ್. ಎರಡು ನಾಲ್ಕು ಮೂರು, ಲೆಕ್ಕ ಮರೆತ್ಹೋಯ್ತು, ಅಂತೂ ಎಲ್ಲಾರೂ ಚಕ್ ಚಕ್ ಚಕ್ ಚಕ್. ಕೂತಿದ್ದಾನೆ, ಮಹಾರಾಜನ ಮೊಮ್ಮಗ, ಅವರಪ್ಪಂದು ಸಿಂಹಾಸನ, ಇಳಿಯೋ ಮಗನೇ, ಯಾರದ್ದೋ ಕಣ್ಣು ಕೀಳಿಸಿದ್ದು ಲೌಡಿ ಮಗನೇ– ತಕಾ, ಚಕ್ ಚಕ್ ಚಕ್.

ಕುದ್ರೆ ಏರ್ದೆ, ಕಾಡಿಗೆ ಬಂದೆ, ಇದೇ ನನ್ನರಮನೆ.

ಹೋದ್ರು ಅಣ್ಣಾವ್ರು, ಹೋದ್ರು, ಹೊರಟೇ ಹೋದ್ರು. "ರಾಜರ್ನ ಕೊಂದ್ರು, ರಾಜ್ಯ ಕೊಂದ್ರು, ನನ್ನೂ ಕೊಂದ್ರು, ದೇವ್ರನ್ನ ಕೊಂದ್ರು, ಧರ್ಮಾನ್ನ ಕೊಂದ್ರು" ಅಂತ ಅಂದ್ಕೊಂಡು ಹೊರಟೇ ಹೋದ್ರು.

ಬನ್ನಿ, ಅಣ್ಣ ಬಸವಣ್ಣ, ಬನ್ನಿ. ಗಂಗಾಳ ಹಾಕಿದೆ. ಕಲ್ಯಾಣಿ ಅನ್ನ ಮಾಡಿ ಕಾಯ್ತಾ ಇದಾಳೆ. ಉಣ್ಣಿ ಬನ್ನಿ, ಬಸವಣ್ಣ ಪ್ರಭೂ.

ಢಂ ಢಂ ಢಂ ಸಿಂಹಾಸನ ಉರುಳ್ತು, ಬಿಜ್ಜಳ ಸತ್ತ. ನಾನೇ ಕೊಂದೆ ಅಂತೀನಿ. ಸುಳ್ಳಲ್ಲ, ನೋಡಿ ರಕ್ತದ ಕಲೆ. ಅವನ ರಕ್ತವೇ.

ಮಧ್ಯಾಹ್ನ ಆಯ್ತು, ಅಣ್ಣನವರು ಬರ್ತಾರೆ, ಅಣ್ಣನವರು. ಊಟಕ್ಕೆ ಬರ್ತಾರೆ, ಊಟಕ್ಕೆ. ಎಲ್ಲಾ ಏಳಿ, ನೆಲ ಗುಡ್ಸಿ, ಸಾರ್ಸಿ, ರಂಗೋಲಿ ಹಾಕಿ. ಅಣ್ಣನವರು ಬರ್ತಾರೆ, ಅಣ್ಣನವರು.

## ೨೪. ಮಧುವರಸ

ನನ್ನ ಕಣ್ಣನ್ನು ಬಿಜ್ಜಳ ಅರಸರು ಕೀಳಿಸಿದರೆ ? ಇಲ್ಲಪ್ಪ, ನನ್ನ ಕಣ್ಣು ಕೀಳಿಸಹೋಗಿ ಅರಸರು ತಮ್ಮ ಕಣ್ಣು ಕಳೆದುಕೊಂಡರು, ಜೀವವನ್ನೇ ಕಳೆದುಕೊಂಡರು. ನಾನು ಬ್ರಾಹ್ಮಣ, ವೇದ ಓದಿದವನು. ಅಹಂಕಾರಕ್ಕಲ್ಲ, ಚನ್ನಾಗೇ ಓದಿದವನು. ನನ್ನ ಮಾತನ್ನ ಈ ಕಡೆ ಅರಸರೂ ಕೇಳಲಿಲ್ಲ, ಆ ಕಡೆ ಬಸವಣ್ಣನವರೂ ಕೇಳಲಿಲ್ಲ. ಉಸ್. ಮಾತಾಡಿ ಮಾತಾಡಿ ಎಂದರೆ ಏನು ಮಾತಾಡಲಿ ? ಎಲ್ಲಿಂದ ಪ್ರಾರಂಭ ಮಾಡಲಿ ? ಈ ಕಥೆಗೆ ಮೊದಲೂ ಇಲ್ಲ, ಕೊನೆಯೂ ಇಲ್ಲ. ಮಾನವ ಹುಟ್ಟಿದಾಗ ಹುಟ್ಟಿತು. ಮಾನವ ಸತ್ತಾಗ ಕೊನೆಯಾಗಬಹುದೇನೋ.

ಅಣ್ಣನವರ ಮಾತು ನನಗೆ ಒಪ್ಪಿಗೆಯಾಯಿತು. ಈ ದೇಹಕ್ಕೆ ಜಾತಿ ಎಂಬುದಿಲ್ಲ. ಇದನ್ನ ಹೊಲಗೇರಿಯಲ್ಲಿಟ್ಟರೆ ಹೊಲೆಯನಾಗಿ ಬೆಳೆಯುತ್ತೆ. ಹಾರವರ ಕೇರಿಯಲ್ಲಿ ಬೆಳಸಿದರೆ ವೇದ ಹೇಳುತ್ತೆ. ನಾಯಿಂದರ ಕೇರಿಯಲ್ಲಿಟ್ಟರೆ ಕ್ಷೌರ ಮಾಡುತ್ತೆ, ಅಗಸರ ಕೇರಿಯಲ್ಲಿಟ್ಟರೆ ಬಟ್ಟೆ ಒಗೆಯುತ್ತೆ. ನಿಜ. ಅಷ್ಟರಮಟ್ಟಿಗೆ ಮಾತ್ರ ಅವರ ಮಾತು ನಿಜ. ಆದರೆ ಒಂದು ಜಾತಿ ಮೇಲು ಒಂದು ಜಾತಿ ಕೀಳು ಅನ್ನೋದನ್ನ ಒಪ್ಪದೇ ಇರೋ ಅಣ್ಣನವರು ತರ್ಕದಲ್ಲಿ ಜಾರಿ ಬಿದ್ದರು. ಈಗ ಜನ ಯಾವುದನ್ನು ಮೇಲು ಜಾತಿ ಅಂತಾರೋ ಅದರಲ್ಲಿ ಹುಟ್ಟಿದೋರೆಲ್ಲ ಕೀಳು ಅಂದರಲ್ಲ ಅವರು, ಅದು ಸರಿಯೆ ? ಜಾತಿ ಇಲ್ಲ ಅನ್ನೋವರಿಗೆ ಯಾವ ಜಾತಿಯೂ ಕಾಣಕೂಡದು. ಹೊಸ ಜಾತಿಯನ್ನು ಸೃಷ್ಟಿ ಮಾಡೋವನು ತನ್ನನ್ನೂ ನಾಶಮಾಡಿಕೋತಾನೆ, ಇರೋ ಜಾತಿಯನ್ನು ನಾಶಮಾಡ್ತಾನೋ ಬಿಡ್ತಾನೋ, ತಾನು ಸೃಷ್ಟಿಮಾಡೋ ಜಾತೀಸಂತೂ ಖಂಡಿತ ನಾಶಮಾಡ್ತಾನೆ. ಜಾತಿ ಅನ್ನೋದು ಸುಳ್ಳು. ಹತ್ತು ಲಕ್ಷ ಜನ ಹತ್ತು ಲಕ್ಷ ವರ್ಷ ಹೇಳಿದರೂ ಸುಳ್ಳು ಸುಳ್ಳೇ. ಬಸವಣ್ಣನವರು ಸೃಷ್ಟಿಮಾಡಿದ ಮಾತ್ರಕ್ಕೆ ಒಂದು ಜಾತಿ ಮಾತ್ರ ನಿಜ ಆಗಿಹೋಗುತ್ತೈ ?

ಅಣ್ಣನವರನ್ನು ಒಂದು ದಿನ ಕೇಳಿದೆ : "ಸ್ವಾಮಿ, ಜಾತಿಯಲ್ಲಿ ಮೇಲು ಕೀಳು ಇಲ್ಲ ಅಂತೀರಿ. ಬ್ರಾಹ್ಮಣರನ್ನ ಬೈತೀರಿ. ಇದರಲ್ಲಿ ಯಾವ ತರ್ಕ ಇದೆ ?" "ಇಲ್ಲ, ಬ್ರಾಹ್ಮಣರು ತಾವೇ ಮೇಲೂ ಅಂದು ಕೊಂಡಿದ್ದಾರೆ. ಅಂತ್ಯಜರು ಕೀಳು ಅಂತಾರೆ. ಅದಕ್ಕೆ ಪ್ರತಿವಾದ ಹೂಡೋದಕ್ಕೆ ನಾನು ಧ್ವನಿ ಎತ್ತರಿಸಿದೆ ಅಷ್ಟೆ" ಅಂದರು. ನಾನು ಮೃದುವಾಗೇ ಹೇಳಿದೆ: "ಧ್ವನಿ ಎತ್ತರಿಸಿದರೆ ಸರಿಯಾದ ಪ್ರತಿವಾದಿ ಯಾದವನ ವಾದ ಅದಕ್ಕೆ ಹೆದರಿ ಓಡಿ ಹೋಗೋದಿಲ್ಲ. ಬದಲಾಗಿ ತರ್ಕ ಓಡಿಹೋಗುತ್ತೆ. ವಿಚಾರಮಾಡಿ, ಅಂತ್ಯಜರನ್ನ ಮುಟ್ಟಬಾರದು ಅಂದವನು ಬ್ರಾಹ್ಮಣ ಮಾತ್ರ ಅಲ್ಲ–ಕ್ಷತ್ರಿಯ ಹಾಗೇ ಹೇಳಿದ, ವೈಶ್ಯ ಹಾಗೇ ಹೇಳಿದ, ಶೂದ್ರ ಹಾಗೇ ಹೇಳಿದ. ಅವರನ್ನೆಲ್ಲಾ ಇಷ್ಟೇ ಉಗ್ರವಾಗಿ ಬೈದು ಹೇಳಿ ನೋಡೋಣ. ಆಗ ನಿಮ್ಮ ಮಾತು ಕೇಳೋಕೆ ಒಂದೇ ಒಂದು ನರಪ್ರಾಣಿ ಉಳಿದರೆ ಕೇಳಿ." ಅಣ್ಣನವರು ಉತ್ತರ ಹೇಳಲಿಲ್ಲ. ನಾನು ಇನ್ನೂ ಬಿಡಿಸಿ ಹೇಳಿದೆ: "ಪಂಚಮರಲ್ಲಿ ಒಬ್ಬ ಒಳ್ಳೆಯವನನ್ನ ತೋರಿಸಿ, ಅಷ್ಟೇ ಒಳ್ಳೆಯವನನ್ನ ಬ್ರಾಹ್ಮಣರಲ್ಲೂ ತೋರಿಸ್ತೀನಿ, ವೈಶ್ಯರಲ್ಲೂ ತೋರಿಸ್ತೀನಿ, ಕ್ಷತ್ರಿಯರಲ್ಲೂ ತೋರಿಸ್ತೀನಿ, ಶೂದ್ರರಲ್ಲೂ ತೋರಿಸ್ತೀನಿ : ಹಾಗೆ ಬ್ರಾಹ್ಮಣರಲ್ಲಿ ಒಬ್ಬ ಕೇಡಿಗನನ್ನು ತೋರಿಸಿ, ಅಂಥವನನ್ನೇ ಪಂಚಮರಲ್ಲೂ ತೋರಿಸ್ತೀನಿ, ಉಳಿದವರಲ್ಲೂ ತೋರಿಸ್ತೀನಿ." ಅದಕ್ಕೂ ಅಣ್ಣನವರು ಉತ್ತ ಹೇಳಲಿಲ್ಲ. ಉತ್ತರ ಇದ್ದರೆ ತಾನೆ, ಹೇಳಿಯಾರು ?

ಅಣ್ಣನವರು ಇನ್ನೂ ಒಂದು ತರ್ಕರಹಿತ ವಾದವನ್ನು ಹೂಡಿ ದರು. ಮೊರ, ಒನಕೆ ದೈವವಲ್ಲ ಎಂದರು. ಲಿಂಗ ದೈವ ಎಂದರು. ಒಂದು ಜಡವಸ್ತು ದೈವ ಅಲ್ಲ ಆದರೆ ಇನ್ನೊಂದು ಜಡವಸ್ತು ದೈವ ಹೇಗೆ ಆದೀತು ? ಅದಕ್ಕೂ ಅಣ್ಣನವರ ಹತ್ತಿರ ಯಾವ ಉತ್ತರವೂ ಇರಲಿಲ್ಲ. ಜನರ ತಲೆಯಲ್ಲಿ ಗೊಂದಲವೋ ಗೊಂದಲ. ಗೊಂದಲ ದಿಂದ ಪಾರಾಗಲು ಜನ ಯಾರನ್ನ ಬೇಕಾದರೂ ಕೊಲ್ಲುತ್ತಾರೆ.

ನನ್ನ ಸ್ವಂತ ಕಥೆ ಕೇಳುತ್ತೀರಾ? ತುಂಬ ಸ್ವಾರಸ್ಯವಾಗಿದೆ. ನನ್ನ ಮಗಳು ಬ್ರಹ್ಮಾಣಿ, ಸ್ಫುರದ್ರೂಪಿ. ಅಣ್ಣಾಸವರ ಮನೆಗೆ ಹೋಗಿ ಬರುವ ಬಳಕೆ ಇತ್ತು. ಅಲ್ಲಿ ಬೀರಯ್ಯ ಅಂತ ಹುಡುಗನ ಜೊತೆ ಸ್ನೇಹ ಬೆಳೀತು. "ನಾನು ಮದುವೆಯಾಗೋದು ಅವನನ್ನೇ" ಅಂದ್ಲು. ನಾನು "ಅವನು ಯಾರಮ್ಮ ?" ಅಂತ ವಿಚಾರಿಸಿದೆ. "ಮೋಚಿ ಹರಳಯ್ಯನವರ ಮಗ. ಅವನೂ ಚೆನ್ನಾಗಿ ಜೋಡು ಹೊಲೀತಾನೆ. ಅರಮನೇಲಿ ಅವನಿಗೆ ತುಂಬ ಕೆಲಸ ಕೊಡ್ತಾ ಇದಾರೆ. ಬಹಳ ಒಳ್ಳೆಯೋನು" ಅಂದ್ಲು. "ಸರಿಯಮ್ಮ" ಅಂದೆ. ನನ್ನ ಕಣ್ಣಿಗೆ ಜಾತಿ ಕಾಣಿಸ್ತಾ ಇರಲಿಲ್ಲ, ಮನಸ್ಸಿಗೂ ಇಲ್ಲ, ಬುದ್ಧಿಗೂ ಇಲ್ಲ. ಬ್ರಾಹ್ಮಣರಿಗೆ ವೇದ ಪ್ರಮಾಣ. ಪುರುಷಸೂಕ್ತ ಬಿಟ್ಟರೆ—ಅದು ವೇದದ್ದು ಅಲ್ಲ ಅಂತಾರೆ—ವೇದದಲ್ಲಿ ಜಾತಿ ವಿಷಯ ಹೇಳಿಲ್ಲ. ನಾವೇ ಜನ ಅದನ್ನ ಹೊಸೆದು, ಮೈಕೈಗೆಲ್ಲಾ ಸುತ್ತಿಕೊಂಡು, ಗೋಜಲು ಮಾಡಿಕೊಂಡು ಉರುಲು ಹಾಕ್ಕೋತಾ ಇದೇವೆ.

ಆದಿರಲಿ. ನಾನು "ಹೂಂ" ಅಂದೆ. ಮಗಳ ಮುಖ ಅರಳಿ ಹೋಯ್ತು. ಒಬ್ಬಳೇ ಮಗಳು, ಹಿಂದಿಲ್ಲ, ಮುಂದಿಲ್ಲ. ಆ ಒಂದು ಕ್ಷಣ ಆ ಅರಳಿದ ಮುಖ ನೋಡಿ, ನಾನು ಹುಟ್ಟಿದ್ದು ಬೆಳೆದದ್ದು ಕಷ್ಟಪಟ್ಟಿದ್ದು ಎಲ್ಲ ಸಾರ್ಥಕ ಅನ್ನಿಸ್ತು. ಆದರೆ ಒಂದೇ ಒಂದು ಕ್ಷಣ ಸ್ವಾಮಿ. ಒಂದು ಕ್ಷಣದ ಸಂತೋಷ ತಂದಿದ್ದೆಲ್ಲ ದುಃಖ, ನೋವು. ತೋಡಿಕೊಳ್ಳಲಾರದ ದುಃಖ, ತಾಳಲಾರದ ನೋವು.

ಮಗೂ, ಅಮ್ಮನ್ನ ಕೇಳು, ಅವಳೂ ನನ್ನ ಹಾಗೆ ಮನಸ್ಸು ಒಪ್ಪಿ 'ಹೂಂ' ಅನ್ನಬೇಕು ಅಂದೆ. ಅವಳ ಮುಖ ಬಾಡಿ ಹೋಯ್ತು. ಅವತ್ತು ಬಾಡಿದ ಮುಖ ಮತ್ತೆ ಅರಳಲೇ ಇಲ್ಲ. ಈಗ ಹ್ಯಾಗಿದಾಳೋ, ಎಲ್ಲಿದಾಳೋ, ಇದ್ದರೂ ನನಗೆ ಕಣ್ಣಿಲ್ಲವಲ್ಲ.

ಅವರಮ್ಮ ಮೊದಲು ನಂಬಲಿಲ್ಲ. ಆಮೇಲೆ ಮಗಳಿಗೆ ರಮಿಸಿ ಹೇಳಿದಳು. ಈ ಅಗ್ರಹಾರದ ಯಾವ ಮುತ್ತೈದೆಯೂ ನಮ್ಮ ಮನೆಗೆ

ಅರಿಶಿನ ಕುಂಕುಮಕ್ಕೆ ಬರುವುದು ಬೇಡವೇ ಎಂದು ಕೇಳಿದಳು. ಬೆಳಗ್ಗೆ ರಾತ್ರಿ ಒಂದೇ ಮಂತ್ರ: "ನಾವು ಸತ್ತರೆ ಶ್ರಾದ್ಧಕ್ಕೆ ಬರೋರು ಯಾರೆ?" ಅವಳು ನಿದ್ರೆ ಮಾಡಲೇ ಇಲ್ಲ. ಒಂದು ಬೆಳಗ್ಗೆ ಎದ್ದಾಗ ಅವಳು ಹಲುಬೋದು ನಿಂತುಹೋಗಿತ್ತು, ಎಲ್ಲ ಕಾಲಕ್ಕೂ ನಿಂತು ಹೋಗಿತ್ತು ಸ್ವಾಮಿ. ಮನೆಯ ಹಿತ್ತಲಿನ ಬಾವಿಯಲ್ಲಿ ಅವಳು ಹಿಂದಿನ ರಾತ್ರಿ ಮುಳುಗಿಕೊಂಡಿದ್ದಳು.

ನನ್ನ ಮಗಳು ಹುಚ್ಚಿಹಾಗಾದಳು. ಅವಳೇ ಹೇಳಿದ್ದು, ಅವಳು ಮದುವೆ ಮಾಡ್ಕೋಬೇಕು ಅಂತಿದ್ಳಲ್ಲ ಬೀರಯ್ಯ. ಅವನು ಇವಳನ್ನ ಮಾತಾಡಿಸೋಕೆ ಬಂದನಂತೆ. ಅವನ ಮೈಮೇಲೆಲ್ಲ ಬಾಸುಂಡೆ. ಮಗ ಬ್ರಾಂಬ್ರು ಹುಡ್ಗೀನ ಮದ್ವೆಮಾಡ್ಕೋತೀನಿ ಅಂದದ್ದೇ ಹರಳಯ್ಯನವರು ಅವನನ್ನು ಹೊಡೆದೂ ಹೊಡೆದೂ ನೀರು ಕೇಳಿಸಿಬಿಟ್ಟರಂತೆ. ಅಣ್ಣನವರು ಹೀಗಾಗ್ತಾ ಇದೆ ಅಂತ ಕೇಳಿ ಓಡಿ ಹೋಗಿ ಎಷ್ಟೋ ಹೇಳಿದರಂತೆ. ಏನೂ ನಡೆಯಲಿಲ್ಲ. ಹರಳಯ್ಯ ಯಾರ ಹತ್ತಿರವೂ ಮಾತಾಡುತ್ತಿಲ್ಲ. ಅಣ್ಣನವರ ಹತ್ತಿರವೂ. ಸುಮ್ಮನೆ ಶೂನ್ಯಾನೇ ದುರುಗುಟ್ಟಿಕೊಂಡು ನೋಡುತ್ತಿದ್ದರು ಅಂತಾರೆ. ಅವರಿಗೆ ಏನು ಕಾಣ್ತಾ ಇತ್ತೋ.

ಒಂದಿನ ಅರಸರು ಕರೆಸಿದ್ರು. ನಾನು ಅರಮನೆಗೆ ಹೋದಾಗ ಆಗಲೇ ಹರಳಯ್ಯ ಬಂದು ಬಾಗಿಲಲ್ಲಿ ನಿಂತಿದ್ರು. ಏನೋ ವಿಚಾರಣೆ ಅಂದ್ರು. "ಬೀದೀಲಿ ಯಾಕೆ?" ಅಂತ ಕೇಳಿದೆ. "ಹರಳಯ್ಯ ಹೊಲೇರು. ಅವರಿಗೆ ಅರಮನೆಯ ಸಭಾಭವನಕ್ಕೆ ಪ್ರವೇಶ ಇಲ್ಲ ಅಂದ್ರು." "ಈ ರಾಜರು, ಈ ರಾಜ್ಯ, ಈ ಧರ್ಮ ಈ ಮೂರೂ ಉಳಿಯೋಲ್ಲ" ಅಂತ ನನ್ನ ಬಾಯಲ್ಲಿ ತಾನೇ ತಾನಾಗಿ ಬರೋಕು ರಾಜರು ನನ್ನ ಹತ್ತಿರ ಬಂದು ನಿಲ್ಲೋಕೂ ಸರಿಹೋಯ್ತು. ನಾನು ನೆಲದ ಮೇಲೆ ಕುಳಿತೇ ಇದ್ದೆ. ಅರಸರು ಹತ್ತಿರ ಬಂದರೂ ಏಳಲಿಲ್ಲ. "ಯಾವುದು ಉಳಿಯೋದಿಲ್ಲ?" ಎಂದು ಘರ್ಜನೆ ಮಾಡಿದರು.

"ಯಾವುದೂ ಉಳಿಯೋದಿಲ್ಲ" ಅಂದೆ. ನನಗೆ ಮಾತಾಡೋಕಾಗಲೀ ಏಳೋಕಾಗಲೀ ಶಕ್ತಿನೂ ಇರಲಿಲ್ಲ, ಮನಸ್ಸೂ ಇರಲಿಲ್ಲ. ಹರಳಯ್ಯ ನವರು ರಾಜರ ಕಡೆ ನೋಡ್ತಾ ಇರಲಿಲ್ಲ. ಬೀದೀಲಿ ಒಂದು ನಾಯಿ ತನ್ನ ಮರೀನ ನೆಕ್ತಾ ಇತ್ತು. ಅದನ್ನೆ ನೋಡ್ತಾ ಇದ್ರು. ನಾನೂ ನೋಡಿದ್ಡೆ, ನೋಡಿದೆ. ಅದೇ ಸೊಗಸಾದ ದೃಶ್ಯದಲ್ಲಿ ಮನಸ್ಸು ನಾಟಿ ಹೋಯಿತು.

ರಾಜಭಟ್ರು ನಮ್ಮ ಸುತ್ತ ಸುತ್ತಿಕೊಂಡರು. ನಮ್ಮಿಬ್ಬರನ್ನೂ ಎತ್ತಿ ನಿಲ್ಲಿಸಿದ್ರು. ನಮುಸ್ಕಾರ ಮಾಡ್ರೋ ಅಂದ್ರು. ಹರಳಯ್ಯನವರು ನಾಯಿಗೂ ಮರಿಗೂ ನಮಸ್ಕಾರ ಮಾಡಿದ್ರು. ನಾನು ಏನು ಮಾಡಿ ಡೆನೋ ನೆನಪಿಲ್ಲ. ರಾಜರು ಕೆಂಡವಾಗಿದ್ದರು. ವಿಚಾರಣೆ ಪ್ರಾರಂಭ ಆಯ್ತು. ನನಗೆ ನಗು ತಡೆಯೋಕೆ ಆಗ್ತಾ ಇರಲಿಲ್ಲ. ನಡೆದದ್ದು ನಡೆದ ಹಾಗೇ ಹೇಳ್ತೀನಿ. ಸ್ವಲ್ಪ ತಡೀರಿ, ನೆನಪು ಮಾಡಿಕೊಂಡು ಹೇಳ್ತೀನಿ. ನಡೆದದ್ದು ನಡೆದ ಹಾಗೇ ಹೇಳ್ತೀನಿ ಅಂದೆ. ಸ್ವಲ್ಪ ಮಾತ್ರ ಮಾತು ಆಚೆ ಈಚೆ ಆಗಿರಬಹುದು ಅಷ್ಟೆ:

ಅರಸರು : ನಿಮ್ಮ ಮಗಳು ಬ್ರಹ್ಮಾಣಿ ಹೊಲೆಯ ಹರಳಯ್ಯನವರ ಮಗ ಬೀರಯ್ಯನನ್ನ ಮದುವೆಯಾಗುತ್ತಾಳಂತೆ ಹೌದೆ ?

ನಾನು : ಬ್ರಹ್ಮಾಣಿ ? ಎಲ್ಲಿದ್ದಾಳೆ ? ನಾನು ಅವಳನ್ನು ಈಗಲೇ ನೋಡಬೇಕು. ನೋಡಿ ಎಷ್ಟೋ ಸಮಯ ಆಯ್ತು.

ಅರಸರು : ನಾಟಕ ಆಡಬೇಡಿ. ಹೊಲೆಯನ ಮಗನ ಜೊತೆ ನಿಮ್ಮ ಮಗಳ ಮದುವೆ ಉಂಟೆ ಇಲ್ಲವೆ ಹೇಳಿ.

ನಾನು : ಹೊಲೆಯನೇ ಇಲ್ಲ ಅಂದ ಮೇಲೆ ಅವನ ಮಗ ಎಲ್ಲಿ ಬಂತು ? ಬಂಜೆ ಮಗನ ಜೊತೆ ಮುಂಡೆ ಮಗಳ ಮದುವೆ ಅಂದ ಹಾಗೆ.

ಘೊಳ್ ಎಂದು ಜನ ನಕ್ಕಿದ್ದು ಕೇಳಿ ಸುತ್ತ ನೋಡಿದೆ. ಜನ ಜಾತ್ರೆ ನೆರೆದಿತ್ತು.

ಅರಸರು : ಅಧಿಕ ಪ್ರಸಂಗವಾಡಿದರೆ ನಾಲಿಗೆ ಸೀಳಿಸುತ್ತೇನೆ.

ನಾನು : ಈ ಕ್ಷಣ ಸೀಳಿಸಿ ಬಿಡಿ. ಅಲ್ಲಿಗೆ ಈ ಅಂಕ ಮುಗಿಯುತ್ತದಲ್ಲ.

ಅರಸರು : ನಿಜ ಹೇಳಿ. ಕೊನೆಯ ಅವಕಾಶ, ಹೊಲೆಯ....

ನಾನು : ಬಿಜ್ಜಳ, ನಿನಗೆ ಬುದ್ಧಿ ಕೆಟ್ಟು ಎಷ್ಟೋ ಕಾಲ ಆಯ್ತು ಅಂತ ಜನ ಹೇಳ್ತಾ ಇದ್ರು. ನಾನು ನಂಬಿರಲಿಲ್ಲ. ಈವತ್ತಿಗೆ ಅದು ನಿಜ ಅಂತ ತಿಳೀತು. ಕೇಳು, ನಾನೂ ಕಡೆಯ ಸಲ ಹೇಳುತ್ತೇನೆ. ಬ್ರಾಹ್ಮಣನಿಗೆ ವೇದ ಪ್ರಮಾಣ. ಅಲ್ಲಿ ಜಾತಿ ವಿಷಯ ಹೇಳಿಲ್ಲ, ಇಂಥವರು ಇಂಥವರನ್ನ ಮದುವೆ ಮಾಡಿಕೊಳ್ಳಿ ಅಂತಲೂ ಹೇಳಿಲ್ಲ, ಬೇಡ ಅಂತಲೂ ಹೇಳಿಲ್ಲ. ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ್ದಕ್ಕೆ ಯಾವನೂ ಬ್ರಾಹ್ಮಣನಾಗೆ ಸಾಯಬೇಕಾಗಿಲ್ಲ. ಹಾಗೇ ಹೊಲೆಯನಾಗಿ ಹುಟ್ಟಿದವನು ಹೊಲೆಯನೇ ಆಗಿ ಬಾಳಬೇಕಾದ್ದೂ ಇಲ್ಲ. ವಿವೇಕಿಗಳಾಗಿದ್ದರೆ ಇಬ್ಬರೂ ಜಾತಿಯನ್ನು ಮೀರಿ ಬೆಳೆಯಬಲ್ಲರು. ನಾನೂ ನನ್ನ ಮಗಳೂ ಬ್ರಾಹ್ಮಣರು ಅನ್ನೋಕಿಂತ ಹರಳಯ್ಯನವರು, ಅವರ ಮಗ ನಮ್ಮ ಬಂಧುಗಳೂ ಅನ್ನೋದೇ ಸತ್ಯಕ್ಕೆ ಸಮೀಪ.

ಈ ಮಧ್ಯೆ ಹರಳಯ್ಯನವರು ಒಂದು ಮಾತೂ ಆಡಲಿಲ್ಲ. ಅವರಿಗೆ ಇವೆಲ್ಲ ಮಾತುಗಳು ಕೇಳಿಸುತ್ತಿದ್ದವೋ, ಕೇಳಿಸಿದರೂ ಅರ್ಥವಾಗುತ್ತಿದ್ದವೋ ಇಲ್ಲವೋ ಒಂದೂ ತಿಳಿಯದು.

ಅರಸರು ನನ್ನ ಮಾತುಗಳಲ್ಲಿ ಎಷ್ಟನ್ನು ಕೇಳಿಸಿಕೊಂಡರೋ ಎಷ್ಟನ್ನು ಕೇಳಿಸಿಕೊಳ್ಳಲಿಲ್ಲವೋ. ಯಾರ ಯಾರದ್ದೋ ಜೊತೆ ಏನೇನೋ ಮಾತಾಡುತ್ತಿದ್ದರು. ಕೊನೆಗೆ ತುಂಬ ಗಂಭೀರವಾಗಿ ಕಾಣಿಸಿಕೊಂಡು ತೀರ್ಪು ನೀಡಿದರು : "ವರ್ಣಸಂಕರ ಮಾಡಲು ನಿಶ್ಚಯಿಸಿರುವ ಮಧುವಯ್ಯ ಹರಳಯ್ಯನವರ ಕಣ್ಣುಗಳನ್ನು ಕಿತ್ತುಬಿಡತಕ್ಕದ್ದು. ಇದು ಉಳಿದ ಅಧರ್ಮಿಗಳಿಗೂ ಎಚ್ಚರಿಕೆ ಆಗತಕ್ಕದ್ದು."

ನಾನು ಗಟ್ಟಿಯಾಗಿ ನಕ್ಕುಬಿಟ್ಟೆ. ಅಷ್ಟು ಜೋರಾಗಿ ನಾನು ನನ್ನ ಜನ್ಮದಲ್ಲೇ ನಕ್ಕಿರಲಿಲ್ಲ. ಅಲೆ ಅಲೆಯಾಗಿ ಉಕ್ಕಿ ಉರುಳುತ್ತಿದ್ದ ನಗೆಯ ಎದುರು ರಾಜರೂ, ಉಳಿದ ಅಷ್ಟು ಜನರೂ ತಬ್ಬಿಬ್ಬಾದರು. ಎಷ್ಟೋ ಹೊತ್ತು ನಗುತ್ತಲೇ ಇದ್ದೆ. ಎಲ್ಲರೂ ನೋಡುತ್ತಲೇ ಇದ್ದರು. ನಕ್ಕುನಕ್ಕು ಬಳಲಿ ಹೇಳಿದೆ :

"ಈಗಲೀಗ ನೀವೂ ನಾವೂ ಒಂದಾದೆವು. ನಿಮಗೂ ಕಣ್ಣಿಲ್ಲ, ನನಗೂ ಕಣ್ಣಿಲ್ಲ. ವೇದ ಶಾಸ್ತ್ರಗಳು ಇಲ್ಲ ಎನ್ನುವ ಜಾತಿಗಳು ನಿಮಗೆ ಕಾಣುತ್ತಿವೆ. ಜನ ಇವೆ ಎನ್ನುವ ಜಾತಿಗಳು ನನಗೆ ಕಾಣುತ್ತಿಲ್ಲ. ಕುರುಡ ರಾಜ, ಕುರುಡ ಪ್ರಜೆ. ಹರಳಯ್ಯನವರ ಮಾತು ಬಿಡಿ. ಅವರಿಗೆ ಈ ಲೋಕದಲ್ಲಿ ಏನೂ ಕಾಣುತ್ತಿಲ್ಲ. ಅವರ ಕಣ್ಣು ಕೀಳಿಸಿದರೂ ಒಂದೇ ಉಳಿಸಿದರೂ ಒಂದೇ. ನಾನು, ನಾನು ಇನ್ನು ನೋಡಬೇಕಾದ್ದು ಏನೂ ಉಳಿದಿಲ್ಲ. ನಿಮಗೋ ಇನ್ನು ಮುಂದೆ ಏನೂ ಕಾಣುವುದಿಲ್ಲ."

ಮುಂದಿನದು ಇನ್ನೂ ಸ್ವಾರಸ್ಯ. ಕಣ್ಣುಗಳನ್ನು ಕೀಳುವುದು ಎಂದರೆ ಕಿತ್ತೇ ಬಿಡುತ್ತಾರೆ ಎಂದಿದ್ದೆ. ಹಾಗಲ್ಲ, ಗುಳಗಳನ್ನು ಕೆಂಪಗೆ ಕಾಯಿಸಿ ಕಣ್ಣುಗುಡ್ಡೆಗೆ ಸೋಕಿಸಿಬಿಡುತ್ತಾರೆ. ಒಂದು ಕ್ಷಣ ಚುಂಯ್ ಅನ್ನುತ್ತೆ. ಆಮೇಲೆ ತುಂಬ ಕಾಲ ನೋಯುತ್ತೆ ಅಷ್ಟೆ.

## ೨೫. ಅಲ್ಲಮಪ್ರಭು

ನಾನು ಯಾತ್ರೆ ಕೈಗೊಂಡದ್ದೇ ಕಲ್ಯಾಣದಲ್ಲಿ ಬಸವಣ್ಣನವರ ಸಾಮೀಪ್ಯದಲ್ಲಿ ಇರಬೇಕು ಎಂದು. ನನ್ನ ಯಾತ್ರೆಯ ಕ್ಷೇತ್ರ ಕಲ್ಯಾಣ; ಉದ್ದೇಶ ಬಸವಣ್ಣನವರೊಡನೆ ಅನುಭಾವದ ವಿನಿಮಯ. ಆತ್ಮ ಆತ್ಮ ಮಥನಿಸಿ ಅನುಭಾವ ಉಕ್ಕುತ್ತದೆ ಎಂಬುದು ನನ್ನ ಅನುಭವ. ನಾವೆಲ್ಲ, ನಾನು, ಸಿದ್ಧರಾಮ ಯೋಗಿಗಳು, ತಾಯಿ ಮಹಾದೇವಿ—ಬೇರೆ ಬೇರೆ ದಿಕ್ಕಿನ ನದಿಗಳು ಈ ಮಹಾಸಮುದ್ರಕ್ಕೆ ಹರಿದು ಬಂದೆವು. ಇಲ್ಲಿನ ಮಹಾ ಘೋಷ ಮುಹೂರ್ತ ಕಾಲ ನಮ್ಮ ಮಾತನ್ನೂ ಅಡಗಿಸಿತು. ಕಲ್ಯಾಣ ಮಹಾನಗರಿ. ನಾನಾ ರಾಜಕಾರಣಗಳು, ವಿವಿಧ ವರ್ಣ ಘರ್ಷಣೆಗಳು, ತರತರದ ಉದ್ದೇಶ ಸಾಧನೆಯ ಅರ್ಥಸಹಿತ, ಅರ್ಥರಹಿತ ಮಾತಿನ ಸಂತೆ. ಈ ಮಹಾಶಬ್ದದ ನಡುವೆ ನಾವು ನಿಶ್ಶಬ್ದರಾಗಿ ಹೋಗಿ ಪ್ರೀತಿಸ್ರೋತರಾಗಿ ಲಿಂಗಾನುಸಂಧಾನದಲ್ಲಿರುವುದು ಕಷ್ಟ ಎಂದು ಕಂಡಿತು.

ಬಸವಣ್ಣ ಅಪರೂಪದ ನಿಲುವಿನ ಅನುಭಾವಿ. ಪರಶಿವ ಲಿಂಗ ದಷ್ಟೇ ಶುದ್ಧ ಚೇತನರು. ಅವರನ್ನು ಸೃಷ್ಟಿಸುವಾಗ ಅವರ ಚೇತನ ದಲ್ಲಿ ಅಹಂಕಾರ ಎನ್ನುವುದನ್ನು ಬೆರಸುವುದನ್ನೇ ಪ್ರಕೃತಿ ಮರೆತಂತೆ ತೋರುತ್ತದೆ. ಅವರನ್ನು ಹುಡುಕಿಕೊಂಡು ಬಂದದ್ದು ಅವರು ಗುರುಗಳ ಗುರು ಎಂದು. ಹಾಗೆ ದೂರ ದೂರದಿಂದ ನಾವು ಹುಡುಕಿಕೊಂಡು ಬಂದರೆ ಅವರು ನಮ್ಮನ್ನೇ ಗುರು ಎಂದು ಗೌರವಿಸುತ್ತಾರೆ. ಅವರಿಂದ ಮಾರ್ಗದರ್ಶನ ಪಡೆಯ ಬಂದವರಿಂದ ಮಾರ್ಗದರ್ಶನ ಬಯಸುತ್ತಾರೆ. ಅವರಿಗೆ ನಮಸ್ಕಾರ ಮಾಡ ಬಂದವರನ್ನು ಕೂರಿಸಿ ಪೂಜಿಸುತ್ತಾರೆ. ಅವರಿಗೆ ತಮ್ಮದಾದ ದೇಹವಿಲ್ಲ, ಮನಸ್ಸಿಲ್ಲ, ತಮ್ಮದು ಎನ್ನಬಹುದಾದ ಒಡೆದ ಓಡು ಕೂಡ ಇಲ್ಲ. ದೇಹವನ್ನು ಗುರುವಿಗೆ, ಮನಸ್ಸನ್ನು ಭಗ ವಂತನಿಗೆ, ಅವರ ಸರ್ವಸ್ವವನ್ನೂ ಭಕ್ತಕೋಟಿಗೆ ಎಂದೋ ಅರ್ಪಿಸಿ ಬಿಟ್ಟ

ದ್ದಾರೆ. ಮೂಲಾಹಂಕಾರದ ಬೇರಿನ ಎಳೆ ಕೂಡ ಇಲ್ಲದ ಇವರನ್ನು ಯಾವುದು ಈ ನೆಲಕ್ಕೆ ಅಂಟಿಸಿ ನಿಲ್ಲಿಸಿದೆ ತಿಳಿಯುತ್ತಿಲ್ಲ. ಅವರೊಂದು ಬೆಳಕಿನ ಕಾಯ. ಅದು ಇಲ್ಲಿಗೆ-ಅಲ್ಲಿಗೆ, ಇಹದಿಂದ ಪರಕ್ಕೆ, ಅಲ್ಲಿಂದ ಇಲ್ಲಿಗೆ ಲಾಳಿಯಾಡುತ್ತ ಅಧ್ಯಾತ್ಮದ ಪೀತಾಂಬರವನ್ನು ನೇಯುತ್ತಿದೆ. ಅವರು ಇಲ್ಲಿಯೂ ಸಲ್ಲುತ್ತಾರೆ, ಅಲ್ಲಿಯೂ ಸಲ್ಲುತ್ತಾರೆ.

ಇಲ್ಲ, ಯೋಚಿಸಿದರೆ ತಿಳಿಯುತ್ತಿದೆ, ಯಾವುದು ಅವರನ್ನು ಈ ಲೋಕಕ್ಕೆ ಬಂಧಿಸಿದೆ ಎಂಬುದು ಕಾಣುತ್ತಿದೆ. ಲೋಕಾನುಕಂಪೆ. ಜನರಿಗೆ ಒಳ್ಳೆಯದಾಗಬೇಕು ಎಂಬುದು ಅವರ ತೀವ್ರ ಹಂಬಲ. ಆದರೆ ತಮಗೆ ಯಾವುದು ಒಳ್ಳೆಯದು ಎಂಬುದು ಜನಕ್ಕೆ ತಿಳಿಯುತ್ತಿಲ್ಲ. ತಮಗೆ ಏನು ಬೇಕೋ ಅದೇ ಒಳ್ಳೆಯದು ಎಂದು ಜನದ ಭಾವನೆ. ಹಿಂದಿನ ಋಷಿಗಳು ಶ್ರೇಯಸ್ಸೇ ಬೇರೆ ಪ್ರೇಯಸ್ಸೇ ಬೇರೆ ಎಂದರು. ಜನ ಪ್ರೆಯಸ್ಸೇ ಬೇಕು, ಅದೇ ಶ್ರೇಯಸ್ಸು ಎಂದು ಭ್ರಮಿಸಿದ್ದಾರೆ. ಬಸವಣ್ಣನವರ ಭಾಷೆ ಸುಲಭ. ಭಾವ ಸರಳ. ಆದರೆ ಜನಕ್ಕೆ ಅವು ಬೇಕಿಲ್ಲ. ಅವರಿಗೆ ಬೇಕಾದದ್ದು ಅರ್ಥವಾಗದ್ದು, ಮಂಕು ಕವಿಸುವಂಥದ್ದು. ಬಸವಣ್ಣನವರಿಗೆ ಜನರನ್ನು ಮರಳುಗೊಳಿಸುವ ಭಾಷೆ ತಿಳಿಯದು.

ಆದರೆ ಅಣ್ಣನವರ ಪೂಜೆಯ ವೈಭವ ಅಣ್ಣನವರನ್ನೂ ಜನರನ್ನೂ ಮರಳುಗೊಳಿಸುವಂಥದೇ. ಅದರಲ್ಲಿ ಮುಳುಗಿ ಹೋಗಿರುವ ಅಣ್ಣನವರಿಗೆ ವಿವರಿಸಿದರೂ ತಿಳಿಯುತ್ತಿಲ್ಲ. ಒಂದು ದಿನ ಕಟುವಾಗಿಯೇ ಹೇಳಿದೆ: "ಮಹಾ ಮೇರುವಿನ ಮರೆಯಲ್ಲಿದ್ದು ಭೂತನ ನೆಳಲನ್ನು ಪೂಜಿಸುವ ಕರ್ಮಿ ನೀವು. ಆ ಮಹಾ ಲಿಂಗಕ್ಕೆ ಮಜ್ಜನ ಎಂದರೇನು? ಪರಿಮಳ ಲಿಂಗಕ್ಕೆ ಪತ್ರ ಪುಷ್ಪ ಎಂದರೇನು? ಜಗಜ್ಯೋತಿ ಲಿಂಗಕ್ಕೆ ಧೂಪದೀಪ ಆರತಿ ಎಂದರೇನು? ಅಮೃತ ಲಿಂಗಕ್ಕೆ ನೈವೇದ್ಯ ಎಂದರೇನು?" ಅವರ ವಿನಯ ನಮ್ಮ ಸ್ಥಿರತೆಯನ್ನು ಕದಲಿಸುತ್ತದೆ. ಅವರ ಮುಗುಳ್ನಗೆ ನಮ್ಮ ಮನಸ್ಸಿನ ಕಲ್ಲನ್ನೂ ದ್ರವಿಸುತ್ತದೆ.

ಮೂರ್ತವಾದದ್ದು ಅಮೂರ್ತವಾಗಲೇ ಬೇಕು. ರೂಪವನ್ನು ತಳೆದದ್ದು ಬಯಲಾಗಲೇ ಬೇಕು. ಕಾಯವಿಡಿದದ್ದು ಅಕಾಯ ವಾಗಲೇ ಬೇಕು. ಆದಿ ಅಂತ್ಯಗಳಿಲ್ಲದ ಕಾಲ ಸೃಷ್ಟಿಯ ಜೊತೆಗೇ ಲಯವನ್ನು ಸೃಷ್ಟಿಸುತ್ತದೆ. ಅದು ಈಗ ಇಲ್ಲಿ ವ್ಯಕ್ತವಾಗ ತೊಡಗಿದೆ.

ಮಾಯೆಗೆ ಅತೀತವಾದದ್ದನ್ನು ಮಾಯೆ ಕವಿಯುತ್ತಿರುವ ದೃಶ್ಯವನ್ನು ಕಾಣುತ್ತಾ ಕಾಣುತ್ತ ನಗುತ್ತಿದ್ದೇನೆ. ನನ್ನ ಅಸಹಾಯಕ ಸ್ಥಿತಿಯನ್ನು ನೆನೆದು ಮರುಗುತ್ತಿಲ್ಲ. ಮಾಯೆಯ ಸರ್ವ ಶಕ್ತಿತ್ವ ವನ್ನೂ ಕಂಡು ನಗೆ ಅಟ್ಟಹಾಸವಾಗುತ್ತಿದೆ.

ಆಗೋ ನೋಡಿ. ಅಲ್ಲಿ ಕಾಣುತ್ತಿರುವ ದೃಶ್ಯವನ್ನು ಸರಿಯಾಗಿ ವ್ಯಾಖ್ಯಾನಿಸಿ ಬದುಕಿಕೊಳ್ಳಿ, ಸಾಧ್ಯವಾದರೆ.

ಬಸವಣ್ಣನವರು ಈಗ ಆನೆಗೆ ಸ್ನಾನ ಮಾಡಿಸುತ್ತಿದ್ದಾರೆ. ಅದಕ್ಕೆ ಅಲಂಕಾರ ಮಾಡಲು ಪ್ರಯತ್ನಿಸುತ್ತಿದ್ದಾರೆ. ಅದಕ್ಕೆ ಅಮೃತದ ರುಚಿಯನ್ನು ತೋರಿಸುತ್ತಿದ್ದಾರೆ. ಅದೋ ಅಣ್ಣನವರು ಏಕೋ ಅತ್ತ ತಿರುಗಿದರು. ಆನೆ ಮತ್ತೆ ತನ್ನ ಹಿಂದಿನ ಕ್ರೀಡೆಗೆ ತೊಡಗುತ್ತಿದೆ. ಸೊಂಡಲಿನಿಂದ ಯಥೇಚ್ಛವಾಗಿ ಮಣ್ಣು ತೆಗೆದು ತನ್ನ ತಲೆಯ ಮೇಲೆ ಎಸೆದುಕೊಂಡು ಸಂತೋಷಿಸುತ್ತಿದೆ. ಅಣ್ಣನವರು ಮತ್ತೆ ಇತ್ತ ತಿರುಗಿದರು. ಆನೆಯನ್ನು ಎಳೆದುಕೊಂಡು ಹೋಗಿ ಸ್ನಾನ ಮಾಡಿಸುತ್ತಿದ್ದಾರೆ. ಸ್ನಾನ ಮುಗಿಯಿತು. ಮತ್ತೆ ಅಲಂಕಾರ. ಅದರ ಮುಂದೆ ಅಮೃತದ ಬೋಗಣಿ ಹಿಡಿದಿದ್ದಾರೆ. ಅದಕ್ಕೆ ಬೇಕಾಗಿಲ್ಲ, ಅದಕ್ಕೆ ಬೇಕು ಸೊಪ್ಪು ಸೆದೆ, ಅಕ್ಕಿ ಬೆಲ್ಲ, ತೆಂಗಿನಕಾಯಿ. ಅಣ್ಣನವರು ಅಮೃತವನ್ನೇ ಕುಡಿಯ ಬೇಕು ಎಂದು ಒತ್ತಾಯಿಸುತ್ತಿದ್ದಾರೆ.

ಅದೋ ಕಾಣುತ್ತಿದೆಯೇ, ಆನೆಗೆ ಹುಚ್ಚು ಕೆರಳುತ್ತಿದೆ. ಅತ್ತ ಇತ್ತ ದಿಕ್ಕು ದಿಕ್ಕಿಗೆ ಸೊಂಡಲು ಬೀಸುತ್ತಿದೆ. ಅದೇ ? ಘೀಂಕಾರ. ಅದು ಬರಿಯ ಆನೆಯ ಘೀಂಕಾರ ಮಾತ್ರವಲ್ಲ, ಪ್ರಳಯ ಕಾಲದ

ಗುಡುಗೂ ಕೇಳುತ್ತಿದೆ. ನೋಡಿ, ನೋಡಿ, ಅದರ ಹುಚ್ಚು ಇನ್ನೂ ಕೆರಳಿದೆ. ಕಾಲಿಗೆ ಕಟ್ಟಿದ ಸರಪಳಿಯನ್ನು ಜಗ್ಗುತ್ತಿದೆ. ಅದೋ ತಾಂಡವ ರುದ್ರನಾಗಿದೆ. ಭೂಮಿ ನಡುಗುತ್ತಿದೆ. ಅದರ ಸೊಂಡಿಲು ಹತ್ತು ದಿಕ್ಕಿನಲ್ಲಿ ತಿರುಗುತ್ತಿರುವ ವೇಗಕ್ಕೆ ಪ್ರಳಯ ಕಾಲದ ನಟರಾಜನ ಹತ್ತು ಕೈಗಳಂತೆ ಕಾಣುತ್ತಿದೆ. ಅಣ್ಣನವರು ಅಂಕುಶವನ್ನು ಅತ್ತ ಇತ್ತ ಆಡಿಸುತ್ತಿದ್ದಾರೆ. ಅವರು ಬೆದರಿದಂತೆ ಕಾಣುತ್ತಿದ್ದಾರೆ. ಇಲ್ಲ, ಅದರ ಮದ ಅವರ ಶಕ್ತಿಯನ್ನು ಮೀರಿ ಹೋಗಿದೆ. ಅದನ್ನು ಅವರು ಕೊಲ್ಲಲೇ ಬೇಕು. ಆದರೆ ಕೊಲ್ಲುವ ಕಲೆ ಅವರಿಗೆ ಏನೇನೋ ತಿಳಿಯದ್ದು. ಅವರು ಅದನ್ನು ಕೊಲ್ಲಲಿಲ್ಲವೋ ಅದೇ ಅವರನ್ನು ಸೀಳಿ ಬಿಸಾಡುತ್ತದೆ. ಆಮೇಲೆ ಈ ನಗರವನ್ನೇ ಧೂಳೀಪಟ ಮಾಡಿ ಬಿಡುತ್ತದೆ.

ಆಯಿತು, ಇನ್ನು ಕಬ್ಬಿಣದ ಸರಪಳಿಗೆ ಉಳಿಗಾಲವಿಲ್ಲ. ಅಣ್ಣನವರ ಯಾವ ಶಕ್ತಿಯೂ ಏಕೆ ಕೆಲಸ ಮಾಡುತ್ತಿಲ್ಲ ? ಅದೇ ಮದ್ದಾನೆಯ ಬಂಧನಗಳೆಲ್ಲ ಕಿತ್ತು ಹೋದವು. ಹಾಂ. ಹಾಂ. ಅಣ್ಣನವರನ್ನು ಸೊಂಡಿಲಿನಲ್ಲಿ ಸುತ್ತಿತು, ಮೇಲಕ್ಕೆ ಎಸೆಯಿತು. ಎಲ್ಲೋ ಎಲ್ಲೋ ದೂರಕ್ಕೆ, ಆಕಾಶದೆತ್ತರಕ್ಕೆ–ಅವರು ಕೆಳಕ್ಕೆ ಬೀಳಲೇ ಇಲ್ಲ. ಏನಾಶ್ಚರ್ಯ !

ಈಗ ಆ ಮತ್ತಗಜಕ್ಕೆ ನಾವು, ನೀವು, ಈ ಅಸಂಖ್ಯಾತ ಜನಸಂದಣಿ, ಇಡೀ ಕಲ್ಯಾಣವೇ ಗುರಿ.

ಗುಹೇಶ್ವರಾ ನಿಮ್ಮ ವಿಗಡ ಚಾರಿತ್ರ್ಯಕ್ಕೆ ಬೆರಗಾದೆನು !

## ಡಾ। ಪ್ರಭುಶಂಕರ ಅವರ ಇತರ ಕೃತಿಗಳು

ಅಲ್ಲಮಪ್ರಭು

ಕನ್ನಡದಲ್ಲಿ ಭಾವಗೀತೆ

ಪಡುಬಿದರೆ ಅಮ್ಮ

ನಿವೇದಿತಾ

ಅಂಗುಲೀಮಾಲ

ಆಮ್ರಪಾಲಿ

ಸುಜಾತ

ಸ್ವಾಮಿವಿವೇಕಾನಂದ

ಕಾವ್ಯಯೋಗ

ಖಲೀಲ್ ಗಿಬ್ರಾನ್

ಕರುಣಾಗಂಗೆ

ದರ್ಶನ ವಿಮರ್ಶೆ

ಉಪನಿಷತ್ತುಗಳ ಸಂದೇಶ

ಭಾರತೀಯ ತತ್ವಶಾಸ್ತ್ರದ ರೂಪರೇಖೆಗಳು

ನಿವೇದಿತಾ (ಬಾಲ ವಾಙ್ಮಯ)

ಅಮೆರಿಕದಲ್ಲಿ ನಾನು ಶಾಂತಿ

ಜನ–ಮನ

ನಕ್ಕು ನಲಿಯೋಣ

ಚಿಂತೆ–ಚಿಂತನೆ

ಸಾಹಿತ್ಯ ಮತ್ತು ಆಧುನಿಕತೆ

ಡಾ.ಪ್ರಭುಶಂಕರ ಅವರು (ಜನನ 1929) ಬಿ.ಎ. (ಆನರ್ಸ್) ಅನ್ನು 1950ರಲ್ಲೂ, ಕನ್ನಡ ಎಂ ಎ ಅನ್ನು 1951ರಲ್ಲೂ ಮಾಡಿದರು. ಎರಡು ಪದವಿಗಳಲ್ಲೂ ತಮ್ಮ ವಿದ್ವತ್ಸಾಧನೆಗೆ ಚಿನ್ನದ ಪದಕಗಳನ್ನು ಗಳಿಸಿದರು.

ವಿದ್ವತ್ಪತ್ರಿಕೆಗಳಲ್ಲಿ ಅನೇಕಾನೇಕ ಸಂಶೋಧನಾತ್ಮಕ ಲೇಖನಗಳನ್ನು ಬರೆದಿರುವುದು ಮಾತ್ರವಲ್ಲದೆ ಪ್ರಭುಶಂಕರ ಅವರು ಅನೇಕ ವಿಮರ್ಶಾತ್ಮಕ ಲೇಖನಗಳ ಸಂಕಲನಗಳನ್ನೂ, ಜೀವನ ಚರಿತ್ರೆಗಳನ್ನೂ ನಾಟಕಗಳನ್ನೂ ಪ್ರಕಟಿಸಿದ್ದಾರೆ. ಅಲ್ಲದೆ ಎಂ. ಹಿರಿಯಣ್ಣನವರ 'ಔಟ್‌ಲೈನ್ಸ್ ಆಫ್ ಇಂಡಿಯನ್ ಫಿಲಾಸಫಿ' ಎಂಬ ಶಾಶ್ವತ ಮೌಲ್ಯವುಳ್ಳ ಕೃತಿಯನ್ನೂ, ಸ್ವಾಮಿ ರಂಗನಾಥಾನಂದರ 'ದಿ ಮೆಸೇಜ್ ಆಫ್ ದಿ ಉಪನಿಷದ್ಸ್' ಎಂಬ ಬೃಹದ್ಗ್ರಂಥವನ್ನೂ ಸಮರ್ಥವಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. 'ಕನ್ನಡದಲ್ಲಿ ಭಾವಗೀತೆ' ಅವರ ಪಿಎಚ್‌ಡಿ ನಿಬಂಧ.

ಡಾ. ಪ್ರಭುಶಂಕರ ಅವರು ಒಂದು ದಶಕಕ್ಕೂ ಹೆಚ್ಚು ಕಾಲದಿಂದ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ನಿರ್ದೇಶಕರಾಗಿದ್ದು, ಪ್ರಸ್ತುತ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಕನ್ನಡವನ್ನು ಬೋಧಿಸುತ್ತಿದ್ದಾರೆ.



49, ಅಕ್ಷಯ, ಕುವೆಂಪು ನಗರ
ಸರಸ್ವತೀಪುರಂ
ಮೈಸೂರು–570 009

